# ಹಂಪಿ ಕನ್ನಡ ವಿಶ್ವವಿದ್ಯಾಲಯ



## ಡಾ. ಶಿವರಾಮ ಕಾರಂತರ
## 'ಮರಳಿ ಮಣ್ಣಿಗೆ' ಕಾದಂಬರಿಯ ಸ್ತ್ರೀಲೋಕ : ಒಂದು ಅಧ್ಯಯನ

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ
ಎಂ.ಫಿಲ್. ಪ್ರಬಂಧ

**ಸಂಶೋಧಕರು**
ವೀರಭದ್ರಯ್ಯ ಸಿ.ವಿ.

ರಿ.ನಂ. ಕೆ.ಎಸ್.ಪಿ.ಬಿ.ಕೆ.ಎಸ್. 00654

**ಮಾರ್ಗದರ್ಶಕರು**
ಡಾ. ವೆಂಕಟಪ್ಪ
ಸಹಾಯಕ ಪ್ರಾಧ್ಯಾಪಕರು, ಕನ್ನಡ ವಿಭಾಗ,
ಎಸ್.ಎಲ್.ಎನ್. ಕಾಲೇಜು, ಬೆಂಗಳೂರು – 560 002.

**ಕನ್ನಡ ಸಾಹಿತ್ಯ ಪರಿಷತ್ತು**
**ಚಾಮರಾಜಪೇಟೆ,**
**ಬೆಂಗಳೂರು – 560 018.**

2012-2013





1158

# ಅಭ್ಯರ್ಥಿಯ ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ೨೦೧೨-೨೦೧೩ನೇ ಸಾಲಿನಲ್ಲಿ **ಡಾ. ಶಿವರಾಮ ಕಾರಂತರ 'ಮರಳಿ ಮಣ್ಣಿಗೆ' ಕಾದಂಬರಿಯ ಸ್ತ್ರೀಲೋಕ : ಒಂದು ಅಧ್ಯಯನ** ಎಂಬ ಶೀರ್ಷಿಕೆಯ ಈ ಪ್ರಬಂಧವನ್ನು ಡಾ. ವೆಂಕಟಪ್ಪ, ಸಹಾಯಕ ಪ್ರಾಧ್ಯಾಪಕರು, ಕನ್ನಡ ವಿಭಾಗ, ಎಸ್.ಎಲ್.ಎನ್. ಕಾಲೇಜ್, ಬೆಂಗಳೂರು, ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದೇನೆ.

ಈ ನಿಬಂಧವು ನನ್ನ ಸ್ವಂತ ಬರವಣಿಗೆಯಾಗಿದ್ದು, ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ವೀರಭದ್ರಯ್ಯ ಸಿ.ವಿ.

ಸ್ಥಳ -: ಬೆಂಗಳೂರು
ದಿನಾಂಕ :೧೨-೬-೧೪

ಸಂಶೋಧನಾ ವಿದ್ಯಾರ್ಥಿ
ವೀರಭದ್ರಯ್ಯ ಸಿ.ವಿ.

1158

# ಮಾರ್ಗದರ್ಶಕರ ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೧೨-೨೦೧೩ನೇ ಸಾಲಿನಲ್ಲಿ ಎಂ.ಫಿಲ್ ಪದವಿಗಾಗಿ **ಡಾ. ಶಿವರಾಮ ಕಾರಂತರ 'ಮರಳಿ ಮಣ್ಣಿಗೆ' ಕಾದಂಬರಿಯ ಸ್ತ್ರೀಲೋಕ : ಒಂದು ಅಧ್ಯಯನ** ಎಂಬ ಶೀರ್ಷಿಕೆಯ ಈ ಪ್ರಬಂಧವನ್ನು ವೀರಭದ್ರಯ್ಯ ಸಿ.ವಿ. ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದಾರೆ.

ಈ ನಿಬಂಧದ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

**ಸ್ಥಳ : ಬೆಂಗಳೂರು**
**ದಿನಾಂಕ :** ೧೩।೬।೨೦೧೪

ವೆಂಕಟಪ್ಪ

**ಮಾರ್ಗದರ್ಶಕರು**

**ಡಾ|| ವೆಂಕಟಪ್ಪ**
**ಕನ್ನಡ ಉಪನ್ಯಾಸಕರು**
**ಎಸ್.ಎಲ್.ಎನ್ . ಕಾಲೇಜು**
**ಕೋಟೆ, ಬೆಂಗಳೂರು-2.**

**ಡಾ. ವೆಂಕಟಪ್ಪ**
ಸಹಾಯಕ ಪ್ರಾಧ್ಯಾಪಕರು,
ಕನ್ನಡ ವಿಭಾಗ,
ಎಸ್.ಎಲ್.ಎನ್. ಕಾಲೇಜು,
ಬೆಂಗಳೂರು – 560 002.

1158

# ಡಾ. ಶಿವರಾಮ ಕಾರಂತರ 'ಮರಳಿ ಮಣ್ಣಿಗೆ' ಕಾದಂಬರಿಯ ಸ್ತ್ರೀಲೋಕ : ಒಂದು ಅಧ್ಯಯನ



## ಪರಿವಿಡಿ

# ಅಧ್ಯಾಯ – ೦೧

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

### ಪೀಠಿಕೆ

ವೇದಕಾಲದಿಂದ ಹಿಡಿದು ಆಧುನಿಕ ಯುಗದವರೆಗಿನ ವೈಚಾರಿಕ ವಲಯದಲ್ಲಿ ಹೆಣ್ಣು ಶಕ್ತಿ ಸ್ವರೂಪಿಣಿಯಾಗಿ, ಕೌಟುಂಬಿಕ ವತ್ಸಲೆಯಾಗಿ ಗಮನ ಸೆಳೆದಿದ್ದಾಳೆ.

ಬ್ರಹ್ಮ ಜ್ಞಾನವನ್ನು ಅರಿತುಕೊಳ್ಳುವ ಉಪನಯನ ವಿಧಿಯಿಂದ ಸಂಸ್ಕಾರಗೊಳ್ಳುವುದೇ ಮೊದಲಾದ ಅವಕಾಶಗಳಿಗೆ ಬದ್ಧರಾಗಿದ್ದ ಸ್ತ್ರೀಯರು ಬ್ರಹ್ಮವಾದಿನಿಯರೆಂದು ಅನ್ನಿಸಿಕೊಂಡ ಉಲ್ಲೇಖಗಳು ಸ್ತ್ರೀಶಕ್ತಿಯ ಪರಿಕಲ್ಪನೆಯಲ್ಲಿ ಮಹತ್ವ ಎನಿಸಿದೆ.

ಕೌಟಿಲ್ಯನ ಅರ್ಥಶಾಸ್ತ್ರವು ಹೆಣ್ಣು ಮಕ್ಕಳಿಗೂ ತಂದೆಯ ಆಸ್ತಿಯಲ್ಲಿ ಅಧಿಕಾರ ಕಲ್ಪಿಸಿದ್ದರಿಂದ ಅದು ಆ ಕಾಲದ ಸಮಾಜಕ್ಕೆ ಹೆಚ್ಚು ಕ್ರಿಯಾತ್ಮಕವಾಗಿ ಪಕ್ಷಾತೀತವಾಗಿ ಸ್ಪಂದಿಸಿದೆ ಎಂದು ತಿಳಿಯಬಹುದು.

'ಬ್ರಾಹ್ಮಣ' ಸಾಹಿತ್ಯದಲ್ಲಿ ಸ್ತ್ರೀಯರಿಗೆ ಸಂಬಂಧಿಸಿದ ವಿಶೇಷ ಉಲ್ಲೇಖ ದೊರೆಯದೆ ಇದ್ದರೂ ಐತರೇಯ ಬ್ರಾಹ್ಮಣವು ಓರ್ವ ಹೆಣ್ಣಿಗೆ ಓರ್ವನೇ ಪತಿಯೆಂಬುದನ್ನು ಕಲ್ಪಿಸಿದೆ.

ಮಹಾಭಾರತವು ಹೆಣ್ಣನ್ನು ಶಕ್ತಿ ಸಂಪನ್ನಳಾಗಿ, ಸದಾ ಪ್ರಸನ್ನಳಾಗಿ, ಶಿಸ್ತಿನಿಂದ ಗಂಡನಿಗೆ ವಿಧೇಯಳಾಗಿರಬೇಕೆಂದು ಕಲ್ಪಿಸಿದೆ. ದ್ರೌಪದಿಯು ಜೀವಂತವಾಗಿ ಸ್ವರ್ಗಕ್ಕೆ ಏಕೆ ಹೋಗಲಿಲ್ಲ ಎಂಬುದಕ್ಕೆ ಕಾರಣವಾಗಿ ಅವಳು ಎಲ್ಲರಿಗಿಂತ ಅರ್ಜುನನನ್ನೇ ಹೆಚ್ಚು ಪ್ರೀತಿಸಿದ್ದು ಅಕ್ಷಮ್ಯವೆಂಬಂತೆ ತಿಳಿಯಬಹುದು.

'ಸ್ತ್ರೀಯು ಪಿತನಿಂದ, ಸಹೋದರನಿಂದ, ಪತಿಯಿಂದ ಮತ್ತು ಇತರ ಸಂಬಂಧಿಗಳಿಂದ ಗೌರವಿಸಲ್ಪಡಬೇಕು ಮತ್ತು ಪೂಜಿಸಲ್ಪಡಬೇಕು. ಅವಳ ಇಚ್ಛೆಯು ನಿಮ್ಮ ಏಳಿಗೆಯನ್ನು ಬಯಸುವುದೇ ಆಗಿದೆ.

ಕ್ರಿಶ್ಚಿಯನ್ ಧರ್ಮವೂ ಪತಿಯನ್ನು ಪತ್ನಿಯ 'ಯಜಮಾನ' ಎಂದು ಪರಿಗಣಿಸುತ್ತದೆ.

ಮಾತೃ ಪ್ರಧಾನ ಪದ್ಧತಿಯನ್ನು ಅನುಸರಿಸಿದ ಆದಿಮ ಜನಾಂಗದ ಮೂಲಕಲ್ಪನೆಯಲ್ಲಿ ಶಕ್ತಿ ದೇವತೆಯ ಉಪಾಸನೆಯೂ ಒಂದು ಮಕ್ಕಳು ತಾಯಿಗೆ ಸಮೀಪವಾಗಿ ಬೆಳೆಯುವುದರಿಂದ ಮತ್ತು ವಿವಾಹದಲ್ಲಿ ಬಿಗಿಯಾದ ಕಟ್ಟುನಿಟ್ಟುಗಳಿವೆ.

ಪ್ರಾಚೀನ ಧರ್ಮಗಳು ಆಕಾಶವನ್ನು ತಂದೆಯಂದೂ ಭೂಮಿಯನ್ನು ತಾಯಿಯೆಂದೂ ಪರಿಗಣಿಸಿ ಸಕಲ ಸೃಷ್ಟಿಗೆ ಚೈತನ್ಯದಾಯಿಯಾದ ಈ ತಾಯಿಯನ್ನು ಹೆಚ್ಚು ಭಕ್ತಿಯಿಂದ ಸ್ತುತಿಸಿವೆ. ಆದ್ದರಿಂದ ಶಕ್ತಿಯೆಂದರೆ ಸ್ತ್ರೀ, ಸ್ತ್ರೀಯೆಂದರೆ ಶ್ರೀ–ಈಕೆ ಸಂಪತ್ತಿನ ಅಧಿದೇವತೆ, ಸಕಲ ದೇವತೆಗಳಿಗೂ ಶಕ್ತಿದಾಯಿನಿ–ಎಂಬೀ ನಂಬಿಕೆ ಬಲವಾಗಿ ಸ್ತ್ರೀಶಕ್ತಿಯ ಮೂಲಕಲ್ಪನೆಯಲ್ಲಿಯೇ ಭಾರತೀಯ ಸಂಸ್ಕೃತಿಯ ರೂಪುರೇಷೆಗಳು ಮೈದಾಳಿದುವು ಎಂಬುದರಲ್ಲಿ ಸಂದೇಹವಿಲ್ಲ.

ತಾಂತ್ರಿಕ ಸಾಧನದಲ್ಲಿ ಮಹತ್ವದ ಸ್ಥಾನಗಳಿಸಿರುವ ಸಪ್ತ ಮಾತೃಕೆಯರು (ಬ್ರಾಹ್ಮಿ, ಮಾಹೇಶ್ವರಿ, ಕೌಮಾರಿ, ವೈಷ್ಣವಿ, ವಾರಾಹಿ, ಇಂದ್ರಾಣಿ ಮತ್ತು ಚಾಮುಂಡಿ) ಇದೇ ಶಕ್ತಿಯ ಭಿನ್ನ ಸ್ವರೂಪಗಳೆಂದು ತಿಳಿಯಲಾಗುತ್ತದೆ.

ಭಾರತೀಯ ಸಾಂಸ್ಕೃತಿಕ ಸಂದರ್ಭದಲ್ಲಿ ಆಯಾ ಧರ್ಮ, ಜಾತಿ, ಉಪಜಾತಿಗಳ ನೆಲೆಯಲ್ಲಿ ಮಹಿಳೆಯರ ಜೀವನ ವಿಧಾನ ಸಾಮಾಜಿಕ ಸ್ಥಾನಮಾನಗಳು ವಿಭಿನ್ನವಾಗಿದ್ದರೂ ಮಹಿಳೆಯ ಶೋಷಣೆ ಮಾತ್ರ ಹಿಂದಿನ ದಿನಗಳಲ್ಲಿಯ ಕೂಡ ಹರಿಯುವ ನದಿಯಂತೆ ಮಹಿಳೆಯ ಶೋಷಣೆ ನಡೆಯುತ್ತಿರುವುದು ಸತ್ಯದ ಸಂಗತಿಯಾಗಿದೆ.

ಪುರುಷ ಪ್ರಧಾನ ಕುಟುಂಬದಲ್ಲಿ ಕಾಣಿಸಿಕೊಂಡ ಸ್ತ್ರೀಯರ ಮೇಲಿನ ಶೋಷಣೆ ಮತ್ತು ವಿಭಿನ್ನ ರೀತಿಯೂ ಲಿಂಗ ತಾರತಮ್ಯದ ಹಿನ್ನೆಲೆಯಲ್ಲಿ ಮಹಿಳಾ ಶೋಷಣೆ ಮಾನವ ಇತಿಹಾಸದಲ್ಲಿ ಕಾಣಿಸಿಕೊಂಡ ಒಂದು ವಿಚಿತ್ರ ಶೋಷಣೆಯಾಗಿದೆ.

ಮಹಿಳೆಯ ಸ್ವಾಯತ್ತತೆ ಮತ್ತು ಸ್ವಾತಂತ್ರ್ಯವನ್ನು ನಿರ್ವಹಿಸಿಕೊಳ್ಳ ಬಯಸುವ ನಾವು ಸ್ತ್ರೀಯರ ಶೋಷಣೆಯ ಮೂಲ ಬೇರನ್ನು ಕಿತ್ತು ಹಾಕಬೇಕಾದರೆ 'ಮಹಿಳೆಯರ ಮೇಲೆ' ಇಂದಿನ ದಿನಗಳಲ್ಲಿ ನಡೆಯುತ್ತಿರುವ ಶೋಷಣೆಯ ಬಗ್ಗೆ ಚಿಂತನೆಯನ್ನು ನಡೆಸಬೇಕಾಗಿದೆ.

ಭಾರತೀಯರಲ್ಲಿ ಯಾವುದೇ ವಿಷಯವನ್ನು ಕುರಿತಂತೆ ಸ್ಪಷ್ಟವಾದ ಚರಿತ್ರೆ ಕಾಣ ಸಿಗುವುದಿಲ್ಲ. ಅಂತೇ ಸ್ತ್ರೀಯರನ್ನು ಕುರಿತಾದ ವಿಚಾರದಲ್ಲೂ ಇದೇ ಆಗಿದೆ. ಇದುವರೆಗಿನ ಚರಿತ್ರೆಕಾರರೆಲ್ಲರೂ ಸಾಹಿತ್ಯ–ಶಾಸನ, ನಾಣ್ಯ, ಪುರಾತನ ಕಾಲದ ಮನೆ, ಗುಡಿ ಮೂಲಕವೇ ಚರಿತ್ರೆಯನ್ನು ಕಂಡುಕೊಳ್ಳುವ, ಕಟ್ಟುವ .ಸಾಹಸವನ್ನು ಮಾಡಿದ್ದಾರೆ. ಆದರೆ ಇವುಗಳಾವುವೂ ತಮಗೆ ತಾವೇ ಸಮರ್ಥವಾಗಿ ಪುಷ್ಟೀಕರಿಸಲಾರವು. ಆಯಾ ಕಾಲದ ಒಟ್ಟು ಚರಿತ್ರೆಯನ್ನು ಕಟ್ಟುವ ಅರ್ಥಪೂರ್ಣತೆಯಲ್ಲಿ ಪರ್ಯಾವಸಾನಗೊಳ್ಳಲಾರವು.

ವರ್ತಮಾನದಲ್ಲಿರುವ ಮಹಿಳೆಯ ಮೇಲಿನ ಶೋಷಣೆಗೆ ಭೂತಕಾಲದ ಭಯಂಕರ ಇತಿಹಾಸವಿದೆ. ಗತಕಾಲದಲ್ಲಿ ಪುರೋಹಿತಶಾಹಿ ಒತ್ತಿದ ಪಾತ್ರದಂತಹ, ವೇಶ್ಯೆಯರ ಶೋಷಣೆ,

ಕೌಟುಂಬಿಕ ಸ್ತ್ರೀ ಶೋಷಣೆ, ವಿದ್ಯಾವಂತ ಸ್ತ್ರೀ ಶೋಷಣೆ ಇಂದಿಗೂ ಈ ವ್ಯವಸ್ಥೆ ಜೀವಂತವಾಗಿದೆ.

ಈ ಸಂದರ್ಭದ ಕನ್ನಡ ಕಾದಂಬರಿಗಳಲ್ಲಿ ಕಾದಂಬರಿಕಾರರು ಕಂಡುಕೊಂಡ ಕಾರಣಗಳು, ದೃಷ್ಟಿಕೋನಗಳು ಮತ್ತು ವೈಯಕ್ತಿಕವಾಗಿ ಮಹಿಳೆಯರ ಮನಸ್ಥಿತಿಯನ್ನು ಅರ್ಥೈಸಿಕೊಳ್ಳುವ ಮೂಲಕ ಮಹಿಳಾ ಶೋಷಣೆ–ದೌರ್ಜನ್ಯವನ್ನು ಖಚಿತವಾಗಿ ಅರ್ಥ ಮಾಡಿಕೊಳ್ಳಲು ಪ್ರಾಮಾಣಿಕವಾದ ಪ್ರಯತ್ನವನ್ನು ಮಾಡಬೇಕಾಗಿದೆ.

ಹೀಗೆ ಭಿನ್ನಭಿನ್ನ ನೆಲೆಯಲ್ಲಿ, ಮಾದರಿಯಲ್ಲಿ ಚರಿತ್ರೆಯನ್ನು ನಿರ್ವಚಿಸುವ ಅರ್ಥ ಮಾಡಿಕೊಳ್ಳುವ ಕಾಳಜಿಯಲ್ಲಿ ಈ ಸಂಶೋಧನಾ ಪ್ರಬಂಧ ರೂಪುಗೊಂಡಿದೆ. “ಹೆಣ್ಣಿನ ಹುಟ್ಟು ಬೆಳವಣಿಗೆ ಪ್ರಕೃತಿದತ್ತವಾಗಿ ಅವಳಿಗೆ ಮೀಸಲಾಗಿರುವ ಋತುಸ್ರಾವ, ಹೆರಿಗೆ, ತಾಯ್ತನ, ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಅವಳು ಅನುಭವಿಸಿದ ನೋವು, ನಲಿವು, ಹತಾಶೆ–ನಿರಾಶೆ, ಇವುಗಳೆಲ್ಲವುಗಳನ್ನು ಈಗಾಗಲೇ ಪ್ರಚಲಿತದಲ್ಲಿರುವ ಪುರುಷಸಿದ್ಧ ಮಾದರಿಯ ಸಂಶೋಧನ ಗದ್ಯಲಯದಲ್ಲಿ ಸಂಪೂರ್ಣವಾಗಿ ಹಿಡಿದಿಡಲು ಸಾಧ್ಯವಿಲ್ಲ” ಎನ್ನುವ ಶೈಲಜ ಹಿರೇಮಠರ ಮಾತು ಸತ್ಯ.

ಈ ಹಿನ್ನೆಲೆಯಲ್ಲಿ ಸ್ತ್ರೀಯ ಜೀವನದಲ್ಲಿಯ ಅನೇಕ ಅನುಭವಗಳನ್ನು ನೇರವಾಗಿ ಹೇಳಲು ಸಾಂಸ್ಕೃತಿಕ ಸಂಕೋಚಗಳು ಕಾಡುತ್ತವೆ. ಈ ಕಾರಣಕ್ಕಾಗಿ ಮಹಿಳಾ ಚರಿತ್ರೆ ಬೇರೆ ಮಾದರಿಯನ್ನು ಬಯಸುತ್ತದೆ. ಮಹಿಳೆ ಮೊದಲಿನಿಂದಲೂ ತನಗೆ ನೇರವಾಗಿ ಹೇಳಲಾಗದ್ದನ್ನು ಪ್ರತಿಭಟಿಸಲಾಗದ್ದನ್ನು ತನ್ನೊಳಗೆ ನುಂಗಲಾರದ ನೋವನ್ನು ತನ್ನ ಕಥೆಯಾಗಿ ಹೇಳುವ ಮೂಲಕ ನಿರಾಳತೆಯ ನಿಟ್ಟುಸಿರನ್ನು ಕಂಡುಕೊಂಡಿದ್ದಾಳೆ ಎಂಬುದನ್ನು ನಿರೂಪಿಸುವುದು ಈ ನನ್ನ ಅಧ್ಯಯನದ ಸದುದ್ದೇಶವಾಗಿದೆ.

ಡಾ. ಕೆ. ಶಿವರಾಮಕಾರಂತರು ಕನ್ನಡ ನಾಡಿನ ಬಹುಮುಖ ಪ್ರತಿಭೆಯ ಚಿಂತಕರು, ವಿಚಾರವಾದಿ. ವಾಸ್ತವವಾದಿ ಸಾಹಿತಿಯಾಗಿ ಕನ್ನಡ ಸಾರಸ್ವತ ಲೋಕದಲ್ಲಿ ಪ್ರಧಾನ ವ್ಯಕ್ತಿಯಾಗಿದ್ದಾರೆ. ಶಿವರಾಮ ಕಾರಂತರು ಈ ಶತಮಾನದ ಅತ್ಯಧಿಕವಾದ ಪ್ರತಿಭೆಯಾಗಿ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ವಿಪುಲವಾದ ಸಾಹಿತ್ಯವನ್ನು ನಿರ್ಮಾಣ ಮಾಡಿ ಕನ್ನಡ ಸಾಹಿತ್ಯ ಕ್ಷೇತ್ರವನ್ನು ಶ್ರೀಮಂತಗೊಳಿಸಿದ್ದಾರೆ. ಈ ಸಮಾಜವನ್ನು ಸೂಕ್ಷ್ಮ ಚಿಕಿತ್ಸಕ ದೃಷ್ಟಿಯಿಂದ ನೋಡಿ ಅದರೊಳಗಿನ ಸತ್ಯಗಳನ್ನು ಒಳಗಣ್ಣಿನಿಂದ ಗಮನಿಸುವ ಪ್ರಾಮಾಣಿಕತೆ, ಬದುಕಿನ ವಾಸ್ತವತೆ, ನಮ್ಮ ಸಂಸ್ಕೃತಿಯನ್ನು ವಸ್ತುನಿಷ್ಠವಾಗಿ ನೇರವಾಗಿ ಕಾರಂತರು ವಿಮರ್ಶಿಸಿದ್ದಾರೆ. ಅಷ್ಟೇ ಅಲ್ಲ,

ಸಾಮಾಜಿಕವಾದ ಅಂಥ ಶ್ರದ್ಧೆ, ಕ್ರೌರ್ಯ, ಸ್ತ್ರೀ ಶೋಷಣೆಗೆ ಮಿಡಿಯುವ ಮಾನವೀಯತೆಯನ್ನು ಮೆರೆದಿದ್ದಾರೆ. ಅವರೊಬ್ಬ ಮಹಾಮಾನವತಾವಾದಿಯೂ ಹೌದು 'ನಡೆದಾಡುವ ವಿಶ್ವಕೋಶ', ಮತ್ತು 'ಕಡಲ ತೀರದ ಭಾರ್ಗವ' ದಂತಿರುವ ಶಿವರಾಮ ಕಾರಂತರು ಸಾಹಿತ್ಯದ ವಿಭಿನ್ನ ವಲಯಗಳಲ್ಲಿ ತಮ್ಮ ಛಾಪನ್ನು ಮಾಡಿಸಿದ್ದಾರೆ.

ಕಾರಂತರು ವಿದ್ಯಾರ್ಥಿಯಾಗಿದ್ದಾಗ ಗಾಂಧೀಜಿಯವರ ಆದರ್ಶವಾದದ ಪ್ರೇರಣೆಗೆ ಒಳಗಾದ ಕಾರಂತರು ವಾಸ್ತವವಾದಿ ಜೀವನ ದೃಷ್ಟಿ. ಸಾಮಾಜಿಕ ಪ್ರಜ್ಞೆ ಮಾನವೀಯತೆಯ ಅನುಕಂಪ ಅವರ ವ್ಯಕ್ತಿತ್ವದಲ್ಲಿ ಅಡಕವಾಗಿರುವುದರಿಂದಲೇ ಕವಿ ಎಂ.ಗೋಪಾಲಕೃಷ್ಣ ಅಡಿಗರು ಕಾರಂತರನ್ನು ಕುರಿತು, 'ಶಿವರಾಮ ಕಾರಂತರನ್ನು ನಿಮಗೆ ಪರಿಚಯ ಮಾಡಿಕೊಡುವುದೂ ಒಂದೇ, ಸೂರ್ಯನನ್ನು ದೀವಿಗೆಯ ಸೊಡರಿನಿಂದ ತೋರಿಸುವುದೂ ಒಂದೇ' ಎಂದು ಅಭಿಪ್ರಾಯ ಪಡುತ್ತಾರೆ.

ಕಾರಂತರು ನವೋದಯ ಸಾಹಿತ್ಯ ಪರಂಪರೆಯ ಕಾಲ ಘಟ್ಟದಲ್ಲಿ 'ಮಹಾವಾಸ್ತವವಾದಿ' ಪರಿಕಲ್ಪನೆಯನ್ನು ಕನ್ನಡದಲ್ಲಿ ಹುಟ್ಟು ಹಾಕಿದವರಲ್ಲಿ ಪ್ರಮುಖರಾಗಿದ್ದಾರೆ.

'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿ ಪರಿಶೀಲನೆಗಳಿಗೆ ಒಳಗಾಗಿರುವ ಹಲವಾರು ವಿಚಾರಗಳು ಇವೆ. ಒಂದು ದೃಷ್ಟಿಯಿಂದ ಅಲ್ಲಿ ವಿರುದ್ಧ ದಿಕ್ಕುಗಳಲ್ಲಿ ಪ್ರವಹಿಸುವ ಭಾವನೆಗಳಿವೆ. ಇನ್ನೊಂದು ಮಗ್ಗುಲಿನಿಂದ ತಲೆಮಾರುಗಳ ಮನೋಭಾವಗಳ ತುಮುಲಗಳಿವೆ ಬೇರೊಂದು ನೆಲೆಯಿಂದ ಗ್ರಾಮ ಜೀವನ ಮತ್ತು ನಗರವಾಸಿಗಳ ಅನ್ಯೋನ್ಯತೆ ಹಾಗೂ ವಿಸಂಗತಿಗಳಿವೆ. ಮತ್ತೊಂದು ದಿಕ್ಕಿನಿಂದ, ವ್ಯವಸ್ಥೆಯ ಸ್ವೀಕಾರ-ಧಿಕ್ಕಾರಗಳ ಆಯ್ಕೆಯಿದೆ, ಕಾಲಪ್ರವಾಹದ ಗತಿಯನ್ನು ನಿರ್ಧರಿಸುವ ಕಾರಂತರ ಆಸಕ್ತಿಗಳು ಈ ಕಾದಂಬರಿಯಲ್ಲೂ ಕ್ರಿಯಾಶೀಲವಾಗಿರುವುದನ್ನು ಕಾಣುತ್ತೇವೆ.

ವಾಸ್ತವವಾಗಿ ಎಷ್ಟೆಲ್ಲ ಪ್ರಯೋಗ-ಪರ್ಯಟನಗಳನ್ನು ನಡೆಸಿದರೂ ಜೀವವು ಸಾಂತ್ವನವನ್ನು ಪಡೆಯುವುದು ತನ್ನ ಮೂಲ ಸಾಂಸ್ಕೃತಿಕ ಬೇರುಗಳ ಸಾಂಗತ್ಯದಲ್ಲಿಯೇ ಎನ್ನುವ ಸಂದೇಶವನ್ನು ಈ ಕೃತಿಯು ನೀಡುತ್ತದೆ. ಆದರೆ ಅದು ಬರಿಯ ಶರಣಾಗತಿಯಾಗಬಾರದೆನ್ನುವ ಎಚ್ಚರವೂ ಅದಕ್ಕಿದೆ. ಹಾಗೆಯೇ ಈ ಹೋರಾಟಗಳೆಲ್ಲವರ ಕಾರ್ಯ ತಂತ್ರ-ಉದ್ದೇಶ ಪರಿಣಾಮಗಳನ್ನು ಒಂದೇ ಸೂತ್ರವಲ್ಲಿಟ್ಟು ನೋಡಬೇಕಾದ ತುರ್ತುಗಳೂ ಅದಕ್ಕಿವೆ.

ಈ ಕಾದಂಬರಿಯಲ್ಲಿ ಬರುವ ಅತ್ತಿಗೆ-ನಾದಿನಿಯರಾದ ಸರಸೋತಿ-ಪಾರೋತಿಯರ ದೈನಂದಿನ ಬದುಕೆಂದರೆ ಹೋರಾಟಗಳ ಸರಮಾಲೆಯೇ ಆಗಿದೆ. ಹಸಿಕಟ್ಟಿಗೆಯನ್ನು ಉರಿಸಿ,

ಕೂಡಿಸುವ ಸಾಹಸ, ಮನೆಯೊಳಗಿನ ಯಾಂತ್ರಿಕ ಪ್ರಪಂಚಕ್ಕೆ ಜೀವ ತುಂಬಿಸುವ ಉತ್ಸಾಹ. ಒಂದೇ ಎರಡೇ, ಹೆಜ್ಜೆ ಹೆಜ್ಜೆಗೂ ಎದುರಾಗುವ ನೋವು, ಸಂಕಟಗಳು, ಜೀವವನ್ನು ಚಿವುಟುವ ಅನುಭವಗಳು ಈ ಹೆಣ್ಣುಗಳಿಗಿದ್ದವುಗಳೇ.

ಪಾರೋತಿಗೆ ದೂರ್ವಾಸಾ ಅವತಾರದ ಗಂಡ ರಾಮೈತಾಳರೊಂದಿಗೆ ಏಗುವ ತನ್ನ ಕರುಳಿನ ಕುಡಿ ಚಿಗುರದ ದುಃಖಗಳಾದರೆ, ಸರಸೋತಿಗೆ ವೈಧವ್ಯದ ಒಂಟಿತನ, ಬದುಕು ನಿರರ್ಥಕವಾಗುವ ಭಯ. ಪ್ರಾಯಶಃ ಈ ಒತ್ತಡಗಳ ನಿವಾರಣೆಯ ಕ್ರಮವಾಗಿ ನಿರಂತರ ದುಡಿಮೆಯ ಪ್ರವೃತ್ತಿಯು ಅವರಿಗೆ ವರವೇ ಆಗಿತ್ತೇನೋ 'ಸಾಲದ್ದಕ್ಕೆ ಹಸುರುವಾಣಿಯನ್ನು ಬಿತ್ತಿ ಬೆಳೆಯುವಂಥ ಭವಿಷ್ಯದ ಯೋಜನೆಗಳಲ್ಲಿ ಅವರ ಹೊತ್ತು ಹಂಚಿ ಹೋಗುತ್ತದೆ.'–ಈ ಕಾದಂಬರಿಯಲ್ಲಿ ಬರುವ ಮಣ್ಣು, ಮಳೆ ಕಡಲುಗಳಿಗೆ ಇರುವ ಧ್ವನಿಶಕ್ತಿಯೂ ಅನನ್ಯವಾದುದು. ಕಡಲು ಎಷ್ಟೇ ಆರ್ಭಟಿಸಲಿ ತನ್ನ ಎಲ್ಲ ಸಾಮರ್ಥ್ಯಗಳಿಂದ ಅಪ್ಪಳಿಸುತ್ತಿರಲಿ, ಎಲ್ಲೋ ಒಂದು ಕಡೆ ದಂಡೆಯ ಗಡಿನನ್ನದು ಮಾನ್ಯ ಮಾಡಲೇಬೇಕಲ್ಲ. ಗುಡುಗು, ಸಿಡಿಲುಗಳು ಎಷ್ಟು ಹಸಿ ಮರಗಳನ್ನು ಸುಟ್ಟರೂ ಕೊನೆಗೊಮ್ಮೆ ಮೌನವಾಗಲೇ ಬೇಕಲ್ಲ, ಹಾಗೆಯೇ ಬದುಕಿನ ಮೇಲೆ ಎಷ್ಟೆಲ್ಲ ದಾಳಿಗಳು ನಡೆದರೂ ಅವಕ್ಕೆ ಮುಗಿತಾಯವೂ ಇರಲೇಬೇಕಲ್ಲ! ಈ ನಂಬುಗೆಯೇ ಇಂಥ ಬದುಕುಗಳಿಗೆ ಬೆಂಗಾವಲಾಗಿ ನಿಲ್ಲುತ್ತದೆ, ಬರಿಯ 'ಇಲ್ಲ'ಗಳೇ ತುಂಬಿರುವ ಬಾಳನ್ನೂ ಸಹ್ಯವನ್ನಾಗಿ ಮಾಡುತ್ತದೆ.

ಹಾಗೆ ಈ ಸರಸೋತಿಯ ನಿಷ್ಠುರವಾದ. ನಿರ್ಮಲವಾದ ನೈತಿಕ ಬಲದ ಮುಂದೆ ರಾಮೈತಾಳನ ಕುರುಡು ಕೋಪವೂ ಪಲಾಯನ ಮಾಡಬೇಕಾದದ್ದೇ ಅವಳು ಮುನಿಸಿಕೊಂಡಳೆಂದಾದರೆ ಕ್ಷಮಾಪಣೆ ಕೇಳಬೇಕಾದದ್ದೇ. ಅವನ ವ್ಯಕ್ತಿತ್ವದ ಒರಟು ಕವಚದಾಳದಲ್ಲೆಲ್ಲೋ ಮನೆ ಮಾಡಿರುವ ಸ್ನಿಗ್ಧವಾದ ಮೃದುತ್ವದ ಅರಿವಿದ್ದುದರಿಂದಲೇ ಪಾರೋತಿ–ಸರಸೋತಿಯರ ಮನಸ್ಸುಗಳು ತಮ್ಮ ಕರ್ತವ್ಯಗಳಿಂದ ವಿಮುಖವಾಗುವುದಿಲ್ಲ.

ಸ್ತ್ರೀ ಸಾಮ್ರಾಜ್ಯದ ವಹಿವಾಟುಗಳಲ್ಲಿ ಕಂಠಮಟ್ಟ ಮುಳುಗಿದ, ಆ ಜೀವನವನ್ನೇ ಅನಿವಾರ್ಯವಾಗಿಯೂ ಪ್ರೀತಿಸುವ ಜೀವನ್ಮುಖತೆ ಇವರದಾಗಿದೆ. ಪಾರೋತಿಯ ಪಾಡು ಇನ್ನೂ ಕೇಡಾದದ್ದೇ. ತನಗೆ ಮಕ್ಕಳಾಗಲಿಲ್ಲವೆಂದು ಎರಡನೆಯ ಬಾರಿ ವಿವಾಹವಾಗಲು ಹೊರಟ ಗಂಡನ ನಡೆವಳಿಕೆಯನ್ನೂ ಆಕೆ ಮೌನವಾಗಿ ಸಹಿಸುತ್ತಾಳೆ.

ಆಧುನಿಕ ಸಂದರ್ಭದ ಸ್ತ್ರೀಯ ಆತ್ಮಕತೆಯ ಚಿಂತನಾಕ್ರಮದೆಡೆಯಲ್ಲಿ ಪಾರ್ೋತಿಗೆ ಸ್ಥಾನ ಸಿಗಲಾರದೇನೋ. ಆದರೆ ಇಂಥ ಜಿಜ್ಞಾಸೆಗಳೆಲ್ಲವೂ ಕಾರಂತರು ಅಪಾರವಾಗಿ ಲಕ್ಷಿಸುತ್ತಿದ್ದ 'ಕಾಲ'ವನ್ನು ಗೌರವಿಸಿಯೇ ನಡೆಯಬೇಕು.

ಕಾರಂತರು ತಮ್ಮ ಸುತ್ತಲಿನ ಸಮಾಜವನ್ನು ಬಹು ಎಚ್ಚರಿಕೆಯಿಂದ ಗಮನಿಸುತ್ತಿದ್ದವರು. ಅದರ ಓರೆ-ಕೋರೆಗಳು, ಚೆಂದ-ವಿಕೃತಿಗಳು, ಒಲವುಗಳು, ದೌರ್ಬಲ್ಯಗಳು ಎಲ್ಲವೂ ಅವರ ಸಂವೇದನೆಯನ್ನು ಸೂಕ್ಷ್ಮವಾಗಿ ತಟ್ಟಿದವುಗಳೇ ಆಗಿವೆ. ಈ ವಿಚಾರಗಳನ್ನು ಅವರು ತಮ್ಮ ಕಾದಂಬರಿಗಳಲ್ಲಿ ವ್ಯಕ್ತಪಡಿಸುವ ಪ್ರಯತ್ನಗಳನ್ನು ಮಾಡಿದ್ದಾರೆ.

ಕಾರಂತರ ಕಾದಂಬರಿಗಳಲ್ಲಿ ಬಹುತೇಕ ಕಾದಂಬರಿಗಳು ನಾಯಕಿ ಪ್ರಧಾನವಾದ ಹಾಗೂ ಸ್ತ್ರೀ ಕೇಂದ್ರಿತ ಕಾದಂಬರಿಗಳೆಂದರೆ ತಪ್ಪಾಗಲಾರದು. ಮೈಮನಗಳ ಸುಳಿಯಲ್ಲಿನ ಮಂಜುಳ ಮತ್ತು ಮೂಕಜ್ಜಿಯ ಕನಸುಗಳ ಮೂಕಜ್ಜಿ ಹೀಗೆ ಕಾದಂಬರಿಯ ವಿವಿಧ ಸ್ತ್ರೀ ಪಾತ್ರಗಳ ಒಂದೊಂದು ಪಟ್ಟಿ ಬೆಳೆಯುತ್ತಾ ಹೋಗುತ್ತದೆ. ಅಲ್ಲೆಲ್ಲ ಕಾರಂತರು ಚಿತ್ರಿಸಿರುವ ಸ್ತ್ರೀಲೋಕ ಅಸ್ವಾದ್ಯಶವಾದುದು. ಅಂತಹ ಸ್ತ್ರೀಲೋಕ 'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿ ಹೇಗೆ ಮೂಡಿ ಬಂದಿದೆ ಎಂಬುದನ್ನು ಅರಿಯುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಕೈಗೊಳ್ಳಲಾಗಿದೆ.

## ಕೊನೆ ಟಿಪ್ಪಣಿ

೧. ಶೈಲಜಾ ಹಿರೇಮಠ : ಪಾತರದವರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ ಹಂಪಿ-೧೯೯೮-ಪು.೪

೨. ಅದೇ ಪು.೫

೩. ಅದೇ ಪು.೭

# ಅಧ್ಯಾಯ – ೦೨

## ಮರಳಿ ಮಣ್ಣಿಗೆ ಕಾದಂಬರಿಯಲ್ಲಿ ನಿಸರ್ಗ ಮತ್ತು ಹೆಣ್ಣು ಕೌಟುಂಬಿಕ ನೆಲೆಯಲ್ಲಿ ಬಂಜೆ–ತಾಯ್ತನ, ಮುತ್ತೈದೆ–ವಿಧವೆ, ವೃದ್ಧ–ಸ್ತ್ರೀ

'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿ ಕರಾವಳಿಯ ಕಡಲು, ನದಿ, ಸಮತಟ್ಟಾದ ಬಯಲು ಭೂಮಿಗಳಲ್ಲಿ ನಿಸರ್ಗ ಪ್ರೇರಿಸುತ್ತಿದ್ದ ಮನೋಭಾವ ಶಾಂತವೂ, ಸುಂದರವೂ ಆದದ್ದು 'ನಿಸರ್ಗದ ಶಾಂತ ಪ್ರಕೃತಿಯಲ್ಲಿ ದೆವ್ವದ ಉಕ್ಕು ಸೊಕ್ಕುಗಳನ್ನು' ಮೂಡಿಸುವ ಮಳೆಗಾಲವನ್ನು ವೈಭವೀಕರಿಸಿದ್ದಾರೆ.

'ಮರಳಿ ಮಣ್ಣಿಗೆ'ಯ ಪಾರೋತಿಯ ಬದುಕಿನಲ್ಲಿ ಶೂನ್ಯತೆ ಅವರಿಸಿಕೊಳ್ಳುವ ಕ್ಷಣಗಳೂ ಹೀಗೆಯೇ. ರಾಮ ಐತಾಳರ ತಂಗಿ ಸರಸೋತಿ, ಅಣ್ಣನಲ್ಲಿ ಮುನಿಸುಗೊಂಡು ಹೊರಟು ಬಿಟ್ಟಿದ್ದಾಳೆ. ಐತಾಳರ ಪತ್ನಿ ಪಾರ್ವತಿಗೆ ಅವಳು ಕೇವಲ ಅತ್ತಿಗೆಯಲ್ಲ, ಸುಖ–ಕಷ್ಟಗಳಲ್ಲಿ ಭಾಗಿಯಾಗುವ ಅಕ್ಕನಂತಿದ್ದಾಳೆ. ಬಂಧುತ್ವದ ಕೊಂಡಿ ಹೀಗೆ ಕಳಚಿಕೊಳ್ಳಬಹುದೆಂಬ ಎಣಿಕೆಯೇ ಅವಳಿಗೆ ಹೊಸತು', ಹಾಗಾಗಿ ಪಾರೋತಿ ಕಂಗಾಲಾಗಿದ್ದಾಳೆ.

ಸರಸೋತಿಯು ನದಿಯಾಚೆಯ ಬಯಲಿನಿಂದ ಚುಕ್ಕೆಯಾಗಿ ಕಣ್ಮರೆಯಾಗುವ ತನಕವೂ ನಿಂತಿರಬೇಕು. ಅನಂತರ 'ಹೋದಳು' ಎಂದು ಉದ್ಗಾರವೆತ್ತಿ ಕೈಗೆ ಎಟುಕಿದ ಚುಂಗಿ ಮುಳ್ಳಿನ ಕುಡಿಯನ್ನು ಚಿವುಟುತ್ತ, ಅವಳ ಮನಸ್ಸು ಬರಿಬಾನಿನಂತಿತ್ತು, ಅತ್ತ ಕಂತುವ ಸೂರ್ಯ, ಉದಯಿಸಿದ ಕೆಲವೇ ತಾರೆಗಳು–ಇವುಗಳಿಂದ ಕೂಡಿದ ನಸು ಬೆಳಕಿನ ನಸುಗತ್ತಲಲ್ಲಿ ಅವಳ ಮನಸ್ಸು ಬಟ್ಟ ಬಯಲಿನಂತೆ ಹರಡಿತ್ತು.

ರವೀಂದ್ರನಾಥ ಟಾಗೋರರ 'ಲಿಪಿಕಾ' ದಲ್ಲಿ ಹನಿಮಳೆಯಿಂದ ಒದ್ದೆಯಾದ ಹಕ್ಕಿಯೊಂದು ತಟಸ್ಥವಾಗಿ ಕೊಂಬೆಯ ಮೇಲೆ ಕುಳಿತಂತೆ ಕಾಣುವ ದೃಶ್ಯವನ್ನು ತಂದಿದ್ದಾರೆ. 'ಹೆಣ್ಣಿನ ದುಃಖ ಹೆಪ್ಪುಗಟ್ಟುವುದೆಂದರೆ ಹರಿಯುವ ನೀರು ತನ್ನಿಚ್ಛೆಯಂತೆ ಕ್ಷಣ ಮಾತ್ರದಲ್ಲಿ ಕೊಳವೊಂದನ್ನು ರಚಿಸುವಂತೆ ಕದಡಿದ ಕೊಳ, ಮತ್ತೆ ಶಾಂತವಾದಂತೆ. ಈ ಕಾದಂಬರಿಯಲ್ಲಿ ಮುಖ್ಯವಾಗಿ ನಾವು ಗಮನಿಸಬೇಕಾದ ವಿಷಯಗಳು ತುಂಬಾ ಇದೆ. ಪ್ರಕೃತಿ ದರ್ಶನ ಹಾಗೂ ಮಾನವ ಸ್ವಭಾವ ದರ್ಶನವಲ್ಲಿ. ಗಂಡುಗಳು ಆಕಾಲದ ವ್ಯಕ್ತಿಗಳಾಗಿ, ಸ್ವಚ್ಛ ಬದುಕನ್ನು ಬಾಳಲೆಳಸುವ ಛಲವಾದಿಗಳಾಗಿ ಪ್ರಕೃತಿಯನ್ನು ಪ್ರತಿಮಿಸುತ್ತಲೇ ಬದುಕಿಗೆ ಮುಖಾಮುಖಿಯಾಗುತ್ತಾರೆ. ಅತಿ ಸುಂದರ ನಿಸರ್ಗದ ನಡುವೆ ಬಾಳುವೆ ಎರಡು ತಲೆಮಾರಿನ

ಜನರು ನಿಸರ್ಗದೊಡನೆ ಬೆರೆಯಲಾರದೆ ಹೋಗಿದ್ದರೆ ಅದು ಅವರು ಲೌಕಿಕಕ್ಕಿರುವ ಬೆಲೆಯನ್ನು ಕುಗ್ಗಿಸಿ, ಕೈಗೆಟುಕದ ಪಾರಮಾರ್ಥಿಕದಲ್ಲಿ ಗಾಢ ಇಲ್ಲವೆ ಶುಷ್ಕ ನಂಬಿಕೆ ಇರಿಸಿ ಬಾಳಿದ್ದು ಕಾರಣ, ಒಣ ನಂಬಿಕೆಯುವರೂ ಅಲ್ಲಿ ಬರುತ್ತಾರೆ. ಗಾಢ ನಂಬಿಕೆಯಿಂದ ಇಹದ ದುಃಖಗಳನ್ನು ಕಡೆಗಣಿಸಿ ಬಾಳಿದವರೂ ಅಲ್ಲಿ ಬರುತ್ತಾರೆ.

ಹಳ್ಳಿಯ ಪರಿಸರದಲ್ಲಿ ಬದುಕುವ ಜೀವಿಗಳಾದರೂ ದಿನದ ಉದಯಾಸ್ತಗಳಂತೆ ಮಧ್ಯಾಹ್ನದ ಉರಿ ಬಿಸಿಲಂತೆ, ಮಳೆಗಾಲದ ಗುಡುಗು ಮಿಂಚುಗಳಂತೆ ಅವರ ಮನಸ್ಸಿನ ಸಮತೋಲನವನ್ನು ಬಿಗಡಾಯಿಸುತ್ತದೆ, ಮತ್ತೆ ಒಪ್ಪಗೊಳಿಸುವ ಪರಿಸ್ಥಿತಿಗಳು ಇದ್ದೆ ಇರುತ್ತದೆ, ರಾಮ ಐತಾಳರಿಗೂ ತಂಗಿ ಸರಸೋತಿಗೂ ನಡೆದ ವಾಗ್ಯುದ್ಧ ಮತ್ತೆ ತಿಳಿಗೊಳ್ಳುವ ಸಂದರ್ಭವೆಂದರೆ ಮುಂಜಾವಿನ ಸ್ವಚ್ಛ ನಿಸರ್ಗ 'ಕಾಮನ ಬಿಲ್ಲನ್ನು ಬೀಸಿದಂತೆ'

ರಾಮ ಐತಾಳರು ಪತ್ನಿ ಪಾರೋತಿಗಾಗಲಿ ತಂಗಿ ಸರಸೋತಿಗಾಗಲಿ ತನ್ನ ಎರಡನೆಯ ವಿವಾಹ ಪ್ರಸ್ತಾಪ ತಿಳಿಸದೇ ಮೂರು ದಿವಸ ತಾನು ಮನೆಯಲ್ಲಿಲ್ಲ ಎಂದಿಷ್ಟೇ ಹೇಳಿ ಐತಾಳರು ಸಮುದ್ರ ದಂಡೆಯಲ್ಲಿಗೆ ಹೊರಟೇ ಹೋದರು. ಮನೆಯ ಮುಂದೆ ಚಪ್ಪರ ಔತಣದ ಊಟದ ಸಿದ್ಧತೆಗೆ ಅಪ್ಪಣೆ ಕೊಡಿಸಿ ಹೋದ ಐತಾಳರು ದತ್ತುಕೊಳ್ಳುತ್ತಾರೆ ಎಂದೇ ಮನೆಯ ಹೆಂಗಸರು ತಿಳಿದುಕೊಂಡರೂ ತಂಗಿ ಸರಸೋತಿಗೆ ಇದು ಸ್ವಾಭಿಮಾನಕ್ಕೆ ಒದಗಿದ ಧಕ್ಕೆ ಎಂದೆನಿಸಿತು. ಅಸ್ತಿತ್ವವೇ ಇಲ್ಲದ ತನ್ನ ದುಃಸ್ಥಿತಿಗಾಗಿ ಆಕೆ ಸಂತಾಪಗೊಂಡು ಮನೆಬಿಟ್ಟು ಗಂಡನ ಮನೆಗೆ ಹೊರಟಳು.

ಪಾರೋತಿ ಎಷ್ಟು ತಡೆದರೂ ಸರಸೋತಿ ತನ್ನ ಹಠವನ್ನೆ ಸಾಧಿಸಿದಳು. ಪಾರೋತಿಯ ಆಗಿನ ಮನಃಸ್ಥಿತಿಯನ್ನು ಕಾರಂತರು ಬಣ್ಣಿಸಿದ ಬಗೆ ತೀರ ಅರ್ಥಯುಕ್ತವಾದುದು. ಪಾರೋತಿಯ ದುಃಖವು ತನ್ನದೂ ಎನ್ನುವಂತೆ ಚಂದ್ರನ ಗತಿ ಮಂದವಾಗಿದೆ. ಐತಾಳರ ವರ್ತನೆ ಅವನನ್ನು ಯೋಚಿಸುವಂತೆ ಮಾಡುತ್ತದೆ, 'ಸೂರ್ಯ ಗಂಡನಾದರೆ ತಾನು ಹೆಂಡತಿ, ಗಂಡನಿಲ್ಲದೇ ಮನೆ ಸಾಗದು; ಹೆಂಡತಿ ಇಲ್ಲದೆ ಅಂಥ ಗಡಿಬಿಡಿ ಏನೂ ಆಗದು ಎನ್ನುತ್ತಿರಬೇಕು ಚಂದ್ರ ತನ್ನಷ್ಟಕ್ಕೆ' ಪಾರ್ವತಿಯ ಅಸಹಾಯಕತೆಯನ್ನು ತಿಳಿಯಬಹುದು.

ಸಮಕಾಲೀನ ವಿಷಯಗಳ ವಿಶ್ಲೇಷಣೆ ಇದೆ. ಹೆಂಡತಿಯಿದ್ದೂ ಕೂಡ, ವಂಶಪ್ರಾಪ್ತಿಗಾಗಿ ಎರಡನೆಯ ಹೆಂಡತಿಯನ್ನು ಮನೆಗೆ ತರುವ ಐತಾಳರ ವರ್ತನೆ, ಹೆಣ್ಣಿನ ಗೌರವವನ್ನು, ಸ್ವಾತಂತ್ರ್ಯವನ್ನು ನಷ್ಟಗೊಳಿಸುವುದಿದ್ದರೂ ಕಾಲಧರ್ಮವನ್ನು ಮೀರಲಾರದ ಸಾಂಪ್ರದಾಯಿಕ ನೆರಳಿನಲ್ಲಿ ಬಂಧಿತಳಾಗಿರುವ ಪಾರೋತಿಯ ಸ್ಥಿತಿಯನ್ನು ತನಗೆ ಸಮೀಕರಿಸಿಕೊಂಡ ಚಂದ್ರ

ಜಡತೆಯಿಂದ ಮುಂದೆ ಸಾಗಿದ, ದೀಪ ಆರಿದಂತೆ ಆರಿಯೇ ಹೋದ, 'ರಥದ ಗಾಲಿಗೆ ಸಿಲುಕಿದ ಪ್ರಾಣಿಯಂತೆ ಚಂದ್ರನ ಯಾತ್ರೆ ಮುಂದೆ ಸಾಗಿತು. ತೆಳ್ಳಗಿನ ಮುಗಿಲ ಪರದೆಯಲ್ಲಿ ಈಸಿಕೊಂಡು ಅವನು ಪಡು ಕಡಲಿನ ಅಂಚಿನಲ್ಲಿ ಅಡಗಲು ಮುಂದುವರಿದು, ತನಗೆ ತಿಳಿವಿಲ್ಲದೆ, ಪ್ರವಾಹದಲ್ಲಿ ಬಳಿಯುವ ಮರದ ತುಂಡಿನಷ್ಟು ಜಡವಾಗಿ ಸಾಗಿದ. ಕೊನೆಗೊಂದು ಮಿಣುಕು ದೀಪವಾದ, ಕಟ್ಟಕಡೆಗೆ ಅಜ್ಜಿ ಮನೆಯ ಎಣ್ಣೆ ಆರಿದ ದೀಪದಂತೆ ಅವನು ದಿಗಂತದಲ್ಲಿ ಆರಿಯೇ ಹೋಗುತ್ತಾನೆ ಎಂದು ತಿಳಿಯಬಹುದು.

'ಮರಳಿ ಮಣ್ಣಿಗೆ'ಯ ನಾಗವೇಣಿ ಧೃತಿಗೆಡದ ಹೆಣ್ಣು. ಆಕೆ ವಿದ್ಯಾವಂತೆ, ಆದರೂ ನಿಸರ್ಗದೊಡನೆ ಹೋರಾಟ ನಡೆಸುವ ಸತ್ಯಭಾಮೆ, ಸರಸೋತಿ ಇವರ ಬದುಕಿನೊಡನೆ ಒಂದಾಗುವ ಸಂವೇದನಾಶೀಲೆ, ಗಂಡನ ಒರಟುತನ, ಮುಂಗಾಣ್ಕೆಯಿಲ್ಲದ ಹೊಣೆಗೇಡಿತವನ್ನು ಅನುಭವಿಸಿಯೂ ಮುಂದಿನ ಪೀಳಿಗೆಗೆ ದಾರಿ ತಪ್ಪದಂತೆ ಎಚ್ಚರ ವಹಿಸುವ ನಾಗವೇಣಿ ಮಣ್ಣನ್ನು ನೆಚ್ಚದೆಯೂ ಇರವಾದಳು. ಮಂಗಳೂರಿನಿಂದ ಬಂದಂದಿನಿಂದ ಅವಳು ತಂದೆಯ ಮನೆಗೆ ಹೋಗಲಿಲ್ಲ. ಅವಳ ಗಂಡ ಅಪ್ಪನು ಭಯ ಹೋಗಿ ಒಂದೇ ವರ್ಷದೊಳಗೆ, ಐತಾಳರ ವಂಶದವರು ತಮ್ಮ ನೆಲೆಯಲ್ಲೇ ತಾವು ಗೇಣಿಯಾಳುಗಳಾದರು.

'ನಾಗವೇಣಿಯು ಎಲ್ಲರನ್ನು ಕರೆದುಕೊಂಡು ತಮ್ಮ ಮನೆಗೆ ನಡೆದಳು. ಆ ಕೆರೆಯ ದಂಡೆಯನ್ನು ತುಳಿಯುವಾಗ ಹೂವಿನ ಹಾಸಿಗೆಯಲ್ಲಿ ನಡೆದಂತಾಯಿತು... ಬೆಳಗಿನ ಇಳಿ ಬಿಸಿಲು ಅಂಗಳಕ್ಕೆ ಬಿದ್ದಿತ್ತು. ಮನೆ ಬರಿದಾಗಿ ಕಾಣುತ್ತಿತ್ತು. ಎಲ್ಲ ಹೆಂಚು, ಹುಲ್ಲು, ಮರ, ಗೋಡೆಗಳು ನಮ್ಮನ್ನು ಮಾತನಾಡಿಸಲು ಬಂದಿತಾ ಎಂದು ಮೂತಿ ಉದ್ದ ಮಾಡಿಕೊಂಡು ತನ್ನನ್ನು ಕರೆದಂತೆ ನಾಗವೇಣಿಗೆ ಕಾಣಿಸಿತು. ನಾಗವೇಣಿ ಮರಳಿ ಮಣ್ಣಿಗೆ ಬಂದಿದ್ದಳು. ಒಂದರ ಹಿಂದೊಂದು ಮರಣಗಳನ್ನು ಕಂಡಿದ್ದ ನೆಲ, ಈಗ ನಳನಳಿಸುತ್ತಿತ್ತು. ಕಡಲು ನೆಲವನ್ನು ಅಪ್ಪಿಕೊಂಡೇ ಅಂತರಾತ್ಮದ ಒಳನುಡಿಗಳನ್ನು ಬೆಸೆಯುತ್ತಿತ್ತು.

ಮಣ್ಣಿನ ಈ ಸೆಳೆತ, ನಾಗವೇಣಿಯನ್ನು ಮತ್ತೆ ಹೊಸ ವ್ಯಕ್ತಿಯನ್ನಾಗಿ ಮಾಡಿದರೆ ಮಗ ರಾಮನ ಕಡಲ ಪ್ರೇಮ, ಅರಾಲಿನ ಮೇಲಿನ ಅವನ ಆಕರ್ಷಣೆಯನ್ನು ಹೆಚ್ಚಿಸಿದೆ, ನಾಗವೇಣಿಯ ಮನಸ್ಸನ್ನು ಹದಗೊಳಿಸಿದಷ್ಟು ತೀವ್ರವಾಗಿ ಇತರರನ್ನು ತಟ್ಟಿಲ್ಲವೆಂದೇ ಹೇಳಬೇಕು.

ಅನೇಕಾನೇಕ ಸಂದರ್ಭಗಳನ್ನು ಕಲಾತ್ಮಕವಾಗಿ ರೂಪಿಸಿದ ಕಾರಂತರ ಸೃಜನಶೀಲತೆಯು ಥಾಮಸ್ ಹಾರ್ಡಿಯು 'ರಿಟರ್ನ್ ಆಫ್ ದಿ ನೇಟಿವ್ ಕಾದಂಬರಿಯನ್ನು ನೆನಪಿಗೆ ತರುತ್ತವೆ. ಅವರ ಈ ಮರಳಿ ಮಣ್ಣಿಗೆ ಕಾದಂಬರಿ ಎಂದರೆ ತಪ್ಪಾಗಲಾರದು. ಕಾದಂಬರಿಯು

ವ್ಯಕ್ತಪಡಿಸುವ ಸೌಂದರ್ಯದ ಒಂದು ಮಹತ್ವಪೂರ್ಣ ಬದಿ ನಿಸರ್ಗ ಇಂತಹ ಎಡೆಗಳಲ್ಲಿ ಕಾರಂತರ ಶೈಲಿಯು ತುಂಬ ಕಲಾತ್ಮಕ ರೂಪ ತಾಳಿವೆ.

ಶಿವರಾಮ ಕಾರಂತರ ಕಾದಂಬರಿಗಳಲ್ಲಿಯ ಸ್ತ್ರೀ ಚಿತ್ರಣವೂ ಬದುಕಿನ ಬಗೆಗೆ ಶ್ರದ್ಧೆ ಮತ್ತು ಕಾಳಜಿಯನ್ನು ಹೊಂದಿದವಾಗಿವೆ.

ಕುಟುಂಬವನ್ನು ನೆಚ್ಚುವ ಭಾವನಾತ್ಮಕ ಸಂಬಂಧಗಳಿಗಾಗಿ ತುಡಿಯುವ, ಇಡೀ ಬದುಕಿಗಾಗಿ ಹಂಬಲಿಸುವ, ತಮ್ಮ ಅಸ್ತಿತ್ವದ ಬಗೆಗೆ ಅಷ್ಟೇ ಪ್ರಜ್ಞೆಯುಳ್ಳ ಅವರ ಹೆಚ್ಚಿನ ಸ್ತ್ರೀ ಪಾತ್ರಗಳು, ನೇರ ಪ್ರತಿಭಟನೆ ನಡೆಸದೆಯೂ ಗೆಲ್ಲುವ ಪಾತಳಿಯಲ್ಲಿ ನಿಲ್ಲುವಂತೆ ಮಾಡುತ್ತದೆ.

'ಮರಳಿ ಮಣ್ಣಿಗೆ' ಕಾದಂಬರಿಯ ಹೆಣ್ಣು ಜೀವಗಳೇ ರಾಮ ಐತಾಳರ ಸಂಸಾರವೆಂಬ ಸೌಧದ ಜಂತಿಗಳೆನ್ನಬೇಕು. 'ಸೌಜನ್ಯ, ವಾತ್ಸಲ್ಯದ ಪ್ರತೀಕ'ಗಳೆನಿಸಿದ ಈ ವ್ಯಕ್ತಿ ಚಿತ್ರಗಳು ಪಡುಕಡಲ ಭರತ ಇಳಿತಗಳಂತೆ ಬಾಳಿನಲ್ಲೂ ಏರಿಳಿತಗಳನ್ನು ಕಂಡಿವೆ. ಬಿರುಗಾಳಿಗೆ ಬಾಗುವ ಮನೆ ಮರಗಳು ಮತ್ತೆ ಎದ್ದು ನಿಂತು ಆಕಾಶದೆಡೆಗೆ ದಿಟ್ಟಿ ನೋಡುವಂತೆ ಬಾಳಿನಲ್ಲಿ ಆತ್ಮಸ್ಥೈರ್ಯವನ್ನು ತುಂಬಿಕೊಂಡು ಈ ಹೆಣ್ಣುಗಳು ಹೋರಾಡುವ ರೀತಿ ಅದ್ಭುತವೆನಿಸುತ್ತದೆ.

ಹುಚ್ಚು ಹುಚ್ಚಾಗಿ ಕೋಡಿಯ ಕಡಲಲ್ಲಿ ನೀರು ಉಕ್ಕುವುದು, ತೆಂಗಿನ ಮರಗಳು ಸಮುದ್ರರಾಯನಿಗೆ ಆಹುತಿಯಾಗುವುದು. ಮತ್ತೆ ಏನೂ ನಡೆದೇ ಇಲ್ಲವೆಂಬಂತೆ ಕಡಲು ಶಾಂತವಾಗುವುದು–ಇವು ಇಲ್ಲಿಯ ಸ್ತ್ರೀಯರ ಮಾನಸಿಕ ಹೊಯ್ದಾಟ, ಹುಟ್ಟು–ಸಾವುಗಳ ನಡುವಿನ ದುರ್ಭರತೆ ಈ ಎಲ್ಲ ಒತ್ತಡಗಳಿಂದ ಪಾರಾಗಿಯೋ ಎಂಬಂತೆ ಬೆಳೆಸಿಕೊಂಡ ಸಹನೆ. ಔದಾರ್ಯಗಳನ್ನು ಬಿಂಬಿಸುತ್ತವೆ.

ರಾಮ ಐತಾಳರು ನಿತ್ಯ ಪೌರೋಹಿತ್ಯವೆಂದು ಹೊರ ಹೊರಟರೆ ಒಳಹೊರಗಿನ ಜವಾಬು ದಾರಿಯಿಲ್ಲ ಆ ಮನೆಯ ಹೆಂಗಸರದೇ ಆದ್ದರಿಂದ ಐತಾಳರ ಕುಟುಂಬ ವ್ಯವಸ್ಥೆಯೆಂದರೆ ಸರಸೋತಿ, ಪಾರೋತಿ, ಐತಾಳರ ಎರಡನೆಯ ಹೆಂಡತಿ ಸತ್ಯಭಾಮೆ ಸೊಸೆ ನಾಗವೇಣಿ–ಇವರ ಬದುಕಿನ ಸ್ಥಿರತೆ, ಅಸ್ಥಿರತೆಗಳ ಒಂದು ಗಾಥೆ. ಕೌಟುಂಬಿಕವೆನಿಸುವ ವಾತ್ಸಲ್ಯದ ಮೂರ್ತಿಗಳೇ ಎಲ್ಲರೂ 'ಸರಸೋತಿಗೆ ತನ್ನ ಕುಂಕುಮ, ಅಳಿದು ಹೋದ ದುಃಖಕ್ಕಿಂತಲೂ ಪಾರ್ವತಿಯ ಹಿತ ಚಿಂತನೆ ಮುಖ್ಯ. ತನ್ನ ಬಂಜೆತನಕ್ಕಾಗಿ ಮರುಗುವ ಪಾರೋತಿಯನ್ನು ಸಮಾಧಾನಪಡಿಸುತ್ತಾಳೆ'.

–ಐತಾಳರಿಗೆ ಎರಡನೆಯ ಹೆಂಡತಿಯಾಗಿ ಸತ್ಯಭಾಮೆ ಬಂದಾಗಲಂತೂ ಪಾರೋತಿಯ ದುಃಖದ ಆವೇಗಕ್ಕೆ ಬಿಸಿ ತಟ್ಟುವ ಮೊದಲೇ ಎಲ್ಲವೂ ಸಾಮಾನ್ಯವೆಂಬಂತೆ ನಡೆದುಕೊಂಡವಳು ಸರಸೋತಿಯೇ. ಈ ಭೂಮಾತೆಯು ನೆರಳಲ್ಲಿ ನಡೆದಾಡುವ ಇತರ ವ್ಯಕ್ತಿಗಳಿಗೆ ಸ್ವಂತ ಅಸ್ತಿತ್ವವೇ

ಇಲ್ಲವೇನೋ ಎಂಬಂತೆ ಕೆಲವೊಮ್ಮೆ ಭಾಸವಾಗುವುದುಂಟು. ಪಾರೋತಿಯ ಸಾವು ಐತಾಳರ ಮರಣ ಸರಸೋತಿಯ ಜೀವನವನ್ನು ಕುಗ್ಗಿಸಿ ಬಿಟ್ಟರೂ ಲಚ್ಚನ ಮಗ ರಾಮನ ಕಡಲಿನ ಮೋಹ ಅವಳಿಗೆ ತೃಪ್ತಿಯನ್ನು ಕೊಟ್ಟಿದೆ. ಐತಾಳರ ವಂಶದ ಉದ್ಧಾರಕನೆಂದು ಅವರ ಮಗನಾದ ಲಚ್ಚನಲ್ಲಿ ಇರಿಸಿದ ನಂಬಿಕೆ, ಅವನ ಪಲಾಯನದಿಂದ ಛಿದ್ರ ಛಿದ್ರವಾಗಿದೆ. ಲಚ್ಚನ ಪತ್ನಿ ನಾಗವೇಣಿಯ ಧೈರ್ಯ, ರಾಮನಲ್ಲಿ ಮೂಡಿದ ಮಣ್ಣಿನ ಸೆಳೆತದಿಂದಾಗಿ ಸರಸೋತಿ ಎದೆಗಟ್ಟಿ ಮಾಡಿಕೊಳ್ಳುತ್ತಾಳೆ.

ರಾಮ ಐತಾಳರ ಕುಟುಂಬವು ತನ್ನ ನೆಲೆಯಲ್ಲೇ ಗೇಣಿಯಾಳಾಗಿ ದುಡಿಯುವ ಪರಿಸ್ಥಿತಿ ಒದಗಿದಾಗ ಮಗಳು ನಾಗವೇಣಿಯನ್ನು ಕರೆದೊಯ್ಯಲು ವಾಸುದೇವಯ್ಯ ಬರುತ್ತಾನೆ. ಆದರೆ ಮುದುಕಿ ಸರಸೋತಿ, ಸಣ್ಣತ್ತೆ ಸತ್ಯಭಾಮೆ ಇವರನ್ನು ಬಿಟ್ಟು ತಾನು ಸುಖವನ್ನರಸಿ ಹೋಗುವುದೇ? ಅವಳು ಹೇಳುತ್ತಾಳೆ, ಇರುವುದಾದರೆ ಇಲ್ಲೇ ಇರುವುದು, ಇನ್ನು ಈ ಮನೆಯನ್ನು ತೆಗೆದುಕೊಂಡವರಿಗೆ ನಾವಿರುವುದು ಸಮತೋರದೆ ಹೋದರೆ, ಆಚೆ ಅರಾಲಿನಲ್ಲಿ ಸರಕಾರಿ ಬೆಣವಿದೆ. ಅಲ್ಲಾದರೂ ಗುಡಿಕಟ್ಟಿ ಬದುಕುತ್ತೇವೆ ? ಆಕೆ ಹೆಣ್ಣಾಗುವ ಬದಲು ಗಂಡಾಗಿದ್ದರೆ? ಎಂಬ ಯೋಚನೆಯಿಂದ ತಂದೆಯ ಕರುಳಿನ ಕನಿಕರ ನೀರಾಗಿ ಹರಿಯಿತು.

ಕಾಲ ನಿಲ್ಲದು ಭವಿಷ್ಯದ ಆಶಾಕಿರಣಗಳು ತಂಪು ಸೂಸುವ ಹಿತಾನುಭವದೊಂದಿಗೆ ಸರಸೋತಿಗೆ ಬಂದೊದಗುವ ಸಾವು ಅವಳ ದೀರ್ಘ ಬಾಳಿಗೆ ಬರೆದ ಒಂದು ಭಾಷ್ಯವೂ ಆಗುತ್ತದೆ. ಈಗ ಹೋರಾಟಕ್ಕೆ ಅಣಿಯಾದವಳು ನಾಗವೇಣಿಯೊಬ್ಬಳೇ, ಹಿಂದಿನವರಂತೆ ಅವಳೂ ಪ್ರಕೃತಿಯೊಡನೆ ಸೆಣಸುತ್ತಾಳೆ, ಕೊನೆ ಇಲ್ಲದ ಬದುಕಿನ ಪ್ರವಾಹದಲ್ಲಿ ಮುಳುಗಿದವರಿಗಿಂತಲೂ ದಡ ಸೇರುವ ಛಲ ಉಳ್ಳವರೇ ಈ ನೆಲಕ್ಕೆ ಸಲ್ಲುವವರು, ನಾಗವೇಣಿ ಇಂಥ ಛಲಗಾತಿ, ಎಂದು ತಿಳಿಯಬಹುದು.

ನಾಗವೇಣಿಯ ಮನಸ್ಸು ಇಬ್ಬಗೆಯಾಗಿ ಓಡುತ್ತದೆ. ಮನೆಯ ಹಿರಿಯರ ಮೇಲಣ ಮಮತೆ, ಗೌರವಗಳು ಇರುವಷ್ಟು ಬಲವಾಗಿಯೇ, ತನ್ನನ್ನು ದುರ್ಗತಿಗೆ ವಂಚನೆಯಿಂದ ತಂದಿರಿಸಿದ ಗಂಡನ ಮೇಲಿನ ಸಿಟ್ಟಿದೆ.

ಬತ್ತದ ರಾಶಿ ಚಾವಡಿಗೆ ಬಂದು ಬಿದ್ದಿತಾದರೂ ಮೊದಲು ಆಳು ಸೂರನ ಋಣ ತೀರಿಸಿದ್ದಾಯಿತು. ಗೇಣಿ ಕೊಟ್ಟ ಮೇಲೆ ಉಳಿದುದು ಬಟ್ಟೆ, ಬರೆ, ಹುಳಿ, ಉಪ್ಪುಗಳನ್ನು ಕೊಂಡುಕೊಳ್ಳಲೂ ಸಾಲದು. ಆದ್ದರಿಂದ ನಾಗವೇಣಿ, ಸತ್ಯಭಾಮೆಯರಿಬ್ಬರೂ ಸುಗ್ಗಿಯ ಗದ್ದೆಗೆ ಬೂದಿ ಹೊರುವುದು, ನೀರು ಹಾಯಿಸುವುದು, ಬತ್ತಕುಟ್ಟಿ ಅಕ್ಕಿ ಮಾಡುವುದು-ಇಂಥ ಕೆಲಸಕ್ಕೆ

ಸಿದ್ಧರಾದರು. ನಾಗವೇಣಿ ಒನಕೆ ಹಿಡಿದವಳಲ್ಲ, ಅವಲಕ್ಕಿ ಕುಟ್ಟುವ ಸಲುವಾಗಿ ಒಂದೆರಡು ಬಾರಿ ವರ್ಷದಲ್ಲಿ ಆ ಕೆಲಸ ಮಾಡಿ ನುರಿತಿದ್ದಳು. ಈ ಕೆಲವು ದಿನಗಳ ತನಕ ದಿನ ನಿತ್ಯ ಅದನ್ನು ನಡೆಯಿಸಲು ಅವಳ ಕೈಗಳು ಜಡ್ಡುಗಟ್ಟುವುದು, ರಟ್ಟೆನೊಂದಿತು, ನಾಲ್ಕೆಂಟು ದಿನ ತೋಳು ಊದಿ ಅವಳನ್ನು ದಣಿಸಿತು, ಆದರೆ ಜೀವನ ನಡೆಯಬೇಡವೇ ?

'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿ ಮರಣದ ಸರಮಾಲೆಯನ್ನು ಕುರಿತ ಮಾತುಗಳಿವು. ಹುಟ್ಟಿನಂತೆ ಮರಣವೂ ಬದುಕಿನ ಒಂದು ನಿಯಮ. ಅದಕ್ಕಾಗಿ ತಲೆಕೆಡಿಸಿಕೊಂಡು ಬೆಸೆದ ನಂಟನ್ನು ಸಡಿಲಗೊಳಿಸುವುದರಲ್ಲಿ ಯಾವ ಪುರುಷಾರ್ಥವಿದೆ ? ಹೀಗಾಗಿ ಎಲ್ಲರೂ ಬದುಕನ್ನು ಪ್ರೀತಿಸುವವರೇ ಆಗುತ್ತಾರೆ, ಇಲ್ಲಿಯ ಸ್ತ್ರೀಯರ ಮನಸ್ಸೇ ಒಂದು ಕಡಲು, ಇಳಿತ, ಭರತಗಳು ಕಡಲಿನ ಲಕ್ಷಣವೂ ಹೌದಲ್ಲವೇ ? ಕಡಲನ್ನು ಸಮೀಕರಿಸಿಕೊಂಡು ನಡೆಸುವ ವ್ಯಕ್ತಿಯ ಬಾಳಿನ ದಿಕ್ಸೂಚಿಗೂ ಎರಡು ಮುಖಗಳಿವೆ. ಇದ್ದುದರಲ್ಲಿ ತೃಪ್ತಿ ಮತ್ತು ಬಂದುದನ್ನು ಎದುರಿಸುವ ಧೈರ್ಯ, ಸಾವಿನ ಜೊತೆಯಲ್ಲಿ ಪ್ರಕಟವಾಗುವ ಮುಂಗಾಣ್ಕೆ, ಆಶೋತ್ತರಗಳು, ಬದುಕನ್ನು ಸುಂದರಗೊಳಿಸಬಹುದೆನ್ನುವ ಆಶಾಭಾವದ ನೆಲೆಯಲ್ಲಿ ಸ್ತ್ರೀ ಮನಗಳನ್ನು ಅರಳಿಸುತ್ತವೆ. 'ಈ ಕಾದಂಬರಿಯಲ್ಲಿ ಸ್ತ್ರೀ ಪಾತ್ರಗಳನ್ನು ಕಾರಂತರ ಇತರ ಕಾದಂಬರಿಗಳಿಗೆ ಅನ್ವಯಿಸಿ ಹೋಲಿಸುವುದು ಕಷ್ಟ ಸಾಧ್ಯವೆನಿಸುತ್ತದೆ.

ವಿಷಯ ಲೋಲುಪತೆಯೊಂದನ್ನುಳಿದು ಬೇರಾವುದೂ ಆತನ ಮನಸ್ಸಿಗೆ ನಾಟಲಾರದು. ಆತನು ಜೀವನವನ್ನು ಅಳೆಯುವ ದೃಷ್ಟಿಯೇ ವಿಷಯ ಲೋಲುಪತೆಯಿಂದ ತುಂಬಿ ಹೋಗಿದೆ. ಅವನು ವಿದ್ಯಾಭ್ಯಾಸದಲ್ಲಿ ದಡ್ಡನಲ್ಲ. ಲೋಕಜ್ಞಾನದಲ್ಲಿ ಅಜ್ಞಾನಿಯೂ ಅಲ್ಲ. ಪ್ರಾರಂಭದಲ್ಲಿ ಆತನ ನೇತ್ಯಾತ್ಮಕ ಧೋರಣೆಗಳು ರಾಮ ಐತಾಳರ ಬಿಗಿಮುಷ್ಟಿಯ ಧೋರಣೆಗೆ ಪ್ರತಿಕ್ರಿಯೆಗಳಾಗಿ ಮೂಡಿರಬಹುದೆನ್ನಿಸಿದರೂ ಕೂಡ. ಈ ಪಾತ್ರವು ಬೆಳೆದಂತೆ ವಿಷಬೀಜದ ಉದ್ಭವವು ಲಚ್ಚನ ಮಾನಸಿಕವಲಯದಿಂದಲೇ ಆಗಿದೆ ಎಂಬುದು ಸ್ಪಷ್ಟವಾಗುತ್ತದೆ. ಆತನ ಪ್ರತಿಕ್ರಿಯಾತ್ಮಕ ಧೋರಣೆಯು ಸಂಪ್ರದಾಯದ ವಿರುದ್ಧವಲ್ಲ, ವಿಷಯ ಲೋಲುಪತೆಯ ಪರವಾಗಿದೆ. ಏಕೆಂದರೆ ರಾಮ ಐತಾಳರ ಮೇಲ್ನೋಟಕ್ಕೆ ಕಾಣುವ ಜಿಪುಣತನ ಮತ್ತು ಪುರೋಹಿತ ವೃತ್ತಿಗಳು ಲಚ್ಚನನ್ನು ದುಷ್ಟನನ್ನಾಗಿ ಮಾಡಿದವು ಎಂಬ ಒಂದು ವಿಚಾರ ಓದುಗನಿಗೆ ಬಂದುಬಿಡಬಹುದು. ಆದರೆ ಕಾದಂಬರಿಯಲ್ಲಿ ವಸ್ತುಸ್ಥಿತಿ ಮಾತ್ರ ಹಾಗಿಲ್ಲ. ಲಕ್ಷ್ಮೀನಾರಾಯಣನ ಜನ್ಮದ ನಂತರ ರಾಮ ಐತಾಳರ ಮನೆಯಲ್ಲಿ ಉಂಟಾಗುವ ಸಂಭ್ರಮ ಮತ್ತು ಬಾಲ್ಯದಲ್ಲಿ ಸ್ಪರ್ಧೆಯಲ್ಲಿ ಆ ಮಗುವಿಗೆ

ದೊರೆಯುವ ಪ್ರೀತಿ-ವಾತ್ಸಲ್ಯಗಳು ಎಷ್ಟು ಚೆನ್ನಾಗಿ ಚಿತ್ರಿತವಾಗಿವೆಯೆಂದರೆ ಅದರ ಧಾರೆಯಲ್ಲಿ ಎಂಥವನಾದರೂ ಒಳ್ಳೆಯ ಸಂಸ್ಕಾರವನ್ನು ಹೊಂದಬಹುದಾದ ಸಾಧ್ಯತೆ ಇದೆ.

ಈ ದೃಷ್ಟಿಯಿಂದ ನೋಡಿದರೆ ಲಚ್ಚನ ಪಾತ್ರದಲ್ಲಿ ಕಾರಂತರು 'ದುಷ್ಟತನ'ದ ಒಂದು ಅಭ್ಯಾಸವನ್ನೇ ಕೈಗೊಂಡಿದ್ದಾರೆನ್ನಬಹುದು. ಸನ್ನಿವೇಶಗಳಲ್ಲಿ ತಾಮಸಕ್ಕಿಂತ ಒಳ್ಳೆಯ ಗುಣಗಳ ಭಂಡಾರವೇ ಹೆಚ್ಚಾಗಿದೆ, ಒಳ್ಳೆಯವರ ಮಧ್ಯೆ ಬದುಕಿಯೂ ಕೂಡ ಇಂಥ ತಾಮಸಿಗನಾಗಲು ಇರಬಹುದಾದ ಕಾರಣಗಳು ಮೂಲತಃ ವ್ಯಕ್ತಿ ಜನ್ಮವೆಂದೇ ಕಾದಂಬರಿಯು ತೋರಿಸಿಕೊಡುತ್ತದೆ. ಈ ಹಂತದಲ್ಲಿ ಮರೆಯದೆ ಗಮನಿಸಬೇಕಾದ ಅಂಶವೆಂದರೆ, ವಾಮ ಪಂಥೀಯ ವಿಚಾರಧಾರೆಯಲ್ಲಿ ಲಚ್ಚನಂಥ ಪಾತ್ರ ಸಿಲುಕಿಕೊಂಡಿದ್ದರೆ, ಆತನ ತಾಮಸಕ್ಕೆ ಪ್ರಕೃತಿಯೇ ಕಾರಣವೆಂಬಂತೆ ಚಿತ್ರಿತವಾಗಿ ಬಿಡಬಹುದಿತ್ತು. ಆದರೆ ಪರಿಸರ ಮತ್ತು 'ವ್ಯಕ್ತಿತ್ವ'ಗಳೆರಡರಲ್ಲಿ ವ್ಯಕ್ತಿತ್ವದ ಒಡಲಾಳದಿಂದಲೇ ಉದ್ಭವಿಸುವ ತಾಮಸಪ್ರವೃತ್ತಿಗಳಿಗೆ ಪರಿಹಾರವೆಂಬುದಿಲ್ಲ ಎಂಬುದನ್ನು ಕಾದಂಬರಿಕಾರರು ಲಚ್ಚನ ಪಾತ್ರದಲ್ಲಿ ಖಚಿತವಾಗಿ ಮೂಡಿಸುತ್ತಾರೆ.

ವ್ಯಕ್ತಿತ್ವ ಜನ್ಯವಾದ ವಾಮ ಧೋರಣೆಗಳನ್ನು ಹೊಂದಿರುವ ಲಚ್ಚನ ಪಾತ್ರವು ಅಖಂಡ ಕಾದಂಬರಿಯ ಒಂದು ಮಹತ್ವದ ಅಂಶವಾಗಿದೆ, ಏಕೆಂದರೆ ಪಾತ್ರವೆಂಬ ಕಾರಣಕ್ಕಿಂತ ಹೆಚ್ಚಾಗಿ, ಲಚ್ಚನ ಒಂದು ಮೌಲ್ಯ ನಿರ್ಧಾರಕ್ಕೆ ತುಲನಾತ್ಮಕ ಬಿಂದುವಾಗಿ ಮೂಡುತ್ತಾನೆ. ಆತನ ಹೃದಯ ಹೀನತೆಗೆ ಮಿತಿ ಎಂಬುದಿಲ್ಲ, ವಿದ್ಯಾರ್ಥಿದೆಸೆಯಲ್ಲಿ ತಂದೆ ಮತ್ತು ತಾತನನ್ನು ಮೋಸಗೊಳಿಸುತ್ತಾನೆ. ಮದುವೆಯ ನಂತರ ಮಾವನನ್ನು ಮೋಸಗೊಳಿಸುತ್ತಾನೆ ಮತ್ತು ಮಡದಿಯ ವ್ಯಾಧಿಗೆ ಕಾರಣನಾಗುತ್ತಾನೆ. ಸಜ್ಜನಿಕೆಯನ್ನು ನಟಿಸಿ ಹೆಂಡತಿಯಿಂದ ಆಸ್ತಿಯನ್ನು ಬರೆಯಿಸಿಕೊಂಡು ಮಡದಿ ಮತ್ತು ಮಗನ ಬದುಕನ್ನು ಇನ್ನೊಬ್ಬರ ಋಣಕ್ಕೆ ದೂಡುತ್ತಾನೆ, ಈ ಪಾತ್ರದ ಪ್ರಖರತೆಯು ಹೆಚ್ಚಾಗುವುದಕ್ಕೆ ಕಾರಣವೆಂದರೆ, ತುಲನಾತ್ಮಕವಾಗಿ ಮೂಡಿ ಬರುವ ಸರಸೋತಿ ಪಾರೋತಿ ಮತ್ತು ಲಚ್ಚನ ಮಗ ರಾಮ ಇವರು ಪ್ರತಿನಿಧಿಸುವ ಸಾತ್ವಿಕ ಮೌಲ್ಯಗಳಿಂದಾಗಿ. ಕನ್ನಡ ಕಾದಂಬರಿ ಲೋಕದ ಕೆಲವೇ ಮರೆಯಲಾಗದ ಚಿಕ್ಕ ಪಾತ್ರಗಳಲ್ಲಿ ಲಚ್ಚನದೂ ಒಂದು. ಇಂಥವರ ನಡತೆಗಳಿಗೆ ಕಾರಣಗಳನ್ನು ಕಂಡು ಹಿಡಿಯುವುದು ಸುಲಭವಲ್ಲ. ತನ್ನ ವೃದ್ಧಾಪ್ಯದಲ್ಲಿ ಕೂಡ ಲಚ್ಚನು ವಿಷಯ ಲೋಲುಪನಾಗಿ ತನ್ನ 'ನಾಳಿನ' ಯೋಚನೆ ಇಲ್ಲದೆ ಬದುಕುವ ರೀತಿ ಮತ್ತು ಆ ಪಾತ್ರವನ್ನು ಅಪರೂಪದ ಮತ್ತು ಮರೆಯಲಾಗದ ಪಾತ್ರವನ್ನಾಗಿ ಮಾಡುತ್ತದೆ.

ಇಡೀ ಮರಳಿ ಮಣ್ಣಿಗೆ ಕಾದಂಬರಿಯ ಪ್ರಥಮ ತಲೆಮಾರಿನ ಸಾತ್ವಿಕ ಸರಳತೆಯು ಕೇವಲ ಪಾತ್ರಗಳ ತುಲನಾತ್ಮಕತೆಗಾಗಲಿ ಅಥವಾ 'ಕಾಲದ ಬದಲಾವಣೆ'ಯನ್ನು ನಿರೂಪಿಸುವ ಮಟ್ಟಿಗಾಗಲೀ ಇಲ್ಲಿ ಸೀಮಿತವಾಗಿಲ್ಲ. ಮೇಲ್ನೋಟಕ್ಕೆ ಇದು ಈ ತರಹ ಕಂಡರೂ ಕೂಡ ಮೂಲದಲ್ಲಿ ಈ ಕಾದಂಬರಿಯು ವಿವಿಧ ವ್ಯಕ್ತಿಗಳ ವಿಶಿಷ್ಟಗುಣಗಳನ್ನು ಸೆರೆ ಹಿಡಿಯುವುದನ್ನೇ ಆದ್ಯ ಉದ್ದೇಶವನ್ನಾಗಿ ಹೊಂದಿದೆ. ಲಚ್ಚನ ನಂತರದ ತಲೆಮಾರಿಗೆ ಸೇರಿದವನು ಆತನ ಮಗ ರಾಮ. ಅವನ ತಾಯಿಯು ಮಂಗಳೂರಿನ ವಕೀಲರಾದ ವಾಸುದೇವರಾಯರ ಮಗಳು. ಲಚ್ಚನ ಹೆಂಡತಿ ನಾಗವೇಣಿಯು ಲಚ್ಚನನ್ನು ವಿದ್ಯಾವಂತನೆನ್ನುವ ಕಾರಣಕ್ಕಾಗಿಯೇ ಮದುವೆಯಾಗುತ್ತಾಳೆ. ಮಂಗಳೂರಿನ ಸುಖಜೀವನದಲ್ಲಿ ಬೆಳೆದ ನಾಗವೇಣಿಯು ಲಚ್ಚನನ್ನು ಕೈ ಹಿಡಿದ ಮೇಲೆ ಕಣ್ಣೀರಿನಲ್ಲಿ ಕೈತೊಳೆಯುವ ಪರಿಸ್ಥಿತಿ ಉಂಟಾಗುತ್ತದೆ, ಪಾರೋತಿ–ಸರಸೋತಿಯರ ಕಾಲವು ಮುಗಿಯುತ್ತ ಬಂದಿದೆ.

ಲಚ್ಚನ ತಾಮಸಿಕತೆಯು ಪರಾಕಾಷ್ಠೆಯನ್ನು ಮುಟ್ಟುತ್ತದೆ. ಅವನ ಲೈಂಗಿಕ ರೋಗವು ಅವಳಿಗೆ ತಾಗಿ ಅವಳು ಅದರಿಂದ ಹೊರ ಬರುವುದು ಕಷ್ಟವಾಗುತ್ತದೆ. ಅದರಿಂದಾಗಿ ತನ್ನ ಮೊದಲ ಮಗುವನ್ನೂ ಕಳೆದುಕೊಳ್ಳುತ್ತಾಳೆ, ನಂತರ ಲಚ್ಚ ಮತ್ತು ನಾಗವೇಣಿಯರು ಹಲವಾರು ವರ್ಷ ಬೇರೆಯಿರುತ್ತಾರೆ. ಪುನಃ ಲಚ್ಚನ ಪ್ರವೇಶವಾಗಿ ರಾಮನ ಜನನವಾಗುತ್ತದೆ. ಮತ್ತೆ ಬೇರೆಯಾಗುತ್ತಾರೆ. ತೃತೀಯ ಸಲದ ಮಿಲನ ಮಾತ್ರ ಲಚ್ಚನ ನೀಚತನದ ಪರಿಮಾವಧಿಯನ್ನು ತೋರಿಸುತ್ತದೆ. ತನ್ನ ಗಂಡನು ಸಂಪೂರ್ಣವಾಗಿ ಪರಿವರ್ತನೆಯಾಗಿದ್ದಾನೆಂಬಂತೆ ಲಚ್ಚನು ವರ್ತಿಸುತ್ತಾನೆ, ರಾಮ ಐತಾಳಾರು ಮಗನ ಮೇಲಿನ ನಂಬಿಕೆಯನ್ನು ಸಂಪೂರ್ಣವಾಗಿ ಕಳೆದುಕೊಂಡು ಸಾಯುವ ಕಾಲಕ್ಕೆ ತಾವು ಗಳಿಸಿದ ಆಸ್ತಿಯನ್ನೆಲ್ಲಾ ಸೊಸೆಯ ಹೆಸರಿಗೆ ಬರೆಯುತ್ತಾರೆ, ತಂದೆಯ ಮರಣದ ಹಾದಿಯನ್ನೇ ಕಾಯುತ್ತ ಕುಳಿತ ಲಚ್ಚನಿಗೆ ನಿರಾಶೆಯಾಗುತ್ತದೆ. ಪಿತ್ರಾರ್ಜಿತ ಆಸ್ತಿ ಮಾತ್ರ ಲಚ್ಚನಿಗೆ ಸಿಗುತ್ತದೆ.

ಹೀಗಾಗಿ ತಂದೆಯ ಮರಣದ ನಂತರ ಊರಿಗೆ ಬಂದ ಅವನು ಕೆಲವು ದಿನಗಳವರೆಗೆ 'ಪರಿವರ್ತನೆ'ಯ ನಾಟಕವನ್ನಾಡಿ, ನಾಗವೇಣಿಯ ಪರಿವರ್ತನೆಯ ಮುಗ್ಧತನದ ದುರ್ಲಾಭವನ್ನು ಪಡೆದು ಇಡೀ ಆಸ್ತಿಯನ್ನು ಲಪಟಾಯಿಸುತ್ತಾನೆ. ಇವನ ಪರಿವರ್ತನೆಯ ಈ 'ನಾಟಕ'ವು ನಾಗವೇಣಿಯ ಪಾತ್ರದ ಗಟ್ಟಿತನವನ್ನು ತೆರೆದಿಡಲು ಭೂಮಿಕೆ ಅಲ್ಲ. ಕಾದಂಬರಿಕಾರರಾಗಿ ಕಾರಂತರ ಶಕ್ತಿಯು ಇಂಥ ಬೆಳವಣಿಗೆಗಳಲ್ಲೇ ತೊಡಗಿದೆ ಎಂದು ತೋರುತ್ತದೆ. ಲಚ್ಚನ ನೀಚತನವನ್ನು ಬೆಳಕಿಗೆ ತರುವ ಸಂದರ್ಭದ ಗರ್ಭದಲ್ಲೇ ನಾಗವೇಣಿಯ ದುರ್ದೈವ ಅಡಗಿದೆ.

ಕೆಲವರು ಸುಖ ಪಡಲು ಹುಟ್ಟಿ ಬಂದಿರುವುದೇ ಇಲ್ಲವೆಂದು ತೋರುತ್ತದೆ. ಸರಸೋತಿಯು ತಾರುಣ್ಯದಲ್ಲೇ ಗಂಡನನ್ನು ಕಳೆದುಕೊಳ್ಳುತ್ತಾಳೆ. ನಾಗವೇಣಿಯು ಗಂಡನಿಂದ ವಂಚಿತಳಾಗಿ ಯಾತನೆಗಳನ್ನು ಅನುಭವಿಸುತ್ತಾಳೆ. ಪಾರೋತಿ ಸರಸೋತಿಯರ ಪಾತ್ರಕ್ಕೂ ನಾಗವೇಣಿಯ ಪಾತ್ರಕ್ಕೂ ಇರುವ ವ್ಯತ್ಯಾಸವೆಂದರೆ, ಮೊದಲಿನ ಎರಡು ಪಾತ್ರಗಳು. ತಮ್ಮ ಕೈಯಿಂದಲೇ ತಮ್ಮ ಕಷ್ಟದ ಸಂದರ್ಭವನ್ನು ನಿರ್ಮಿಸಿಕೊಂಡಿಲ್ಲ ಮತ್ತು ಅವರು ದೈವವನ್ನು ಬಲವಾಗಿ ನಂಬಿದವರು.

ನಾಗವೇಣಿಯು ತನ್ನ ಕಷ್ಟದ ಸಂದರ್ಭಕ್ಕೆ ತಾನೇ ಕಾರಣಳು ಮತ್ತು ಅದನ್ನು ಧೈರ್ಯದಿಂದ ಮತ್ತು ಆತ್ಮಾಭಿಮಾನದಿಂದ ಎದುರಿಸಿ 'ನೀಚತನ' ಸಹಿಷ್ಣುತೆಯ ಸವಾಲೈತೆಯುತ್ತಾಳೆ. ಇದಲ್ಲದೇ ಮಂಗಳೂರಿನ ವಕೀಲರ ಪುತ್ರಿಯಾಗಿ ವಿವಾಹದ ಮುಂಚಿನ ವರ್ಷಗಳನ್ನು ಸುಖವಾಗಿ ಮತ್ತು ಸುಸಂಸ್ಕೃತವಾದ ಮನೆತನದಲ್ಲಿ ಕಳೆದವಳು ಅವಳು. ಹೀಗಾಗಿ ಅವಳು ಪಡುವ ಜೀವನದ ಯಾತನೆಗಳು ಮನಸ್ಸನ್ನು ಹೆಚ್ಚಾಗಿ ಕಲಕುತ್ತವೆ.

ಸತ್ಯಭಾಮೆ ಮತ್ತು ನಾಗವೇಣಿಯರು ರಾಮ ಐತಾಳರ ಮನೆತನಕ್ಕೆ ಹೊರಗಿನಿಂದ ಬಂದು ಸೇರುವ ಕುಡಿಗಳು. ಸತ್ಯಭಾಮೆಯು ಪ್ರಾರಂಭದಲ್ಲಿ ಸುಖ ಕಂಡರೂ ನಂತರದಲ್ಲಿ ಮಗನಿಂದಾಗಿ ಕಷ್ಟಪಡುತ್ತಾರೆ. ಹಾಗೆಯೇ ನಾಗವೇಣಿ ಕೂಡ ಅದೇ ವ್ಯಕ್ತಿಯನ್ನು ಪತಿಯನ್ನಾಗಿ ಪಡೆದು ಕಷ್ಟ ಪಡುತ್ತಾಳೆ. ಮಗನಾಗಿ ಮತ್ತು ಪತಿಯಾಗಿ ಲಚ್ಚನು ಕಾರಣನಾಗುವ ಕಷ್ಟ ಪರಂಪರೆಯು ಕಾದಂಬರಿಯಲ್ಲಿ ಕೇವಲ ಮಹಿಳೆಯರ ಕಣ್ಣೀರಿನ ಅತಿಭಾವುಕತೆಗೆ ಮಾತ್ರ ಕಾರಣವಾಗಿ ಬಂದಿಲ್ಲ. ಅವರಿಗೆ ಹೋರಾಡುವ ಶಕ್ತಿಯನ್ನು ತಂದೊದಗಿಸುವ 'ಮೂಲ'ವಾಗಿ ಕೂಡ ಲಚ್ಚನ ನೀಚತನವು ಬಿಂಬಿತವಾಗಿರುವುದರಿಂದ ಇವೆಲ್ಲವೂ ಜೀವನದ ಅವಿಭಾಜ್ಯ ಅಂಗಗಳು ಮತ್ತು ಸತ್ಯದರ್ಶನಕ್ಕೆ ಪೂರಕವಾದ ವಿಷಯಗಳೆಂಬಂತೆ ಮೂಡಿವೆ.

ನಾಗವೇಣಿಯು ರಾಮ ಐತಾಳರ ದೂರದರ್ಶಿತ್ವವನ್ನು ಕೂಡ ಕಡೆಗಣಿಸಿ ಆಸ್ತಿಯನ್ನು ಪತಿಯಾದ ಲಚ್ಚನ ಹೆಸರಿಗೆ ವರ್ಗಾಯಿಸುತ್ತಾಳೆ. ಮಗನು ಆಸ್ತಿಯನ್ನು ಉಳಿಸಲಾರ ಎಂಬ ದೂರದರ್ಶಿತ್ವದ ದೃಷ್ಟಿಯಿಂದಲೇ ರಾಮ ಐತಾಳರು ತಮ್ಮ ಆಸ್ತಿಯನ್ನು ಕೊನೆಗಾಲದಲ್ಲಿ ಸೊಸೆಯ ಹೆಸರಿಗೆ ವರ್ಗಾಯಿಸಿದ್ದಾರೆ. ಆದರೆ ಕಪಟವನ್ನರಿಯದ ಮುಗ್ಧ ವಾತಾವರಣದಲ್ಲಿ ಬೆಳೆದ ನಾಗವೇಣಿಯು ಗಂಡನ ಬಣ್ಣದ ಮಾತುಗಳಿಗೆ ಮರುಳಾಗುತ್ತಾಳೆ. ನಾಗವೇಣಿಯ ಈ ಮುಗ್ಧತನವು ಲಚ್ಚನ ನೀಚತನವನ್ನು ತೆರೆದಿಡಲು ವೇದಿಕೆಯಾಗುವಂತೆ ನಾಗವೇಣಿಯ ಕಷ್ಟಗಳು ಅವಳ ಮಗ ರಾಮನ ಉದಾತ್ತಶೀಲ ವಿಕಾಸಕ್ಕೆ ನಾಂದಿಯಾಗುತ್ತವೆ. ಇದು ಅಖಂಡ ಕಾದಂಬರಿಯ ಯಶಸ್ಸಿನ ಲಕ್ಷಣ.

ನಾಗವೇಣಿಯ ಮಗ ರಾಮನಲ್ಲಿಯ ಆತ್ಮಾಭಿಮಾನವು ಎದ್ದುಕಾಣುವ ಗುಣವಾಗಿದೆ. ತಂದೆಯ ಆತ್ಮಾಭಿಮಾನ ರಹಿತವಾದ ಬಾಳು ಮತ್ತು ನಯವಂಚನೆಯ ಚರಿತ್ರೆಗಳು ಮಗನಾದ ರಾಮನ ವ್ಯಕ್ತಿತ್ವವನ್ನು ರೂಪಿಸುವಲ್ಲಿ ಬಹುದೊಡ್ಡ ಪಾತ್ರ ವಹಿಸುತ್ತವೆ. ಪಾರೋತಿ ಮತ್ತು ಸರಸೋತಿಯರು ಲಚ್ಚನ ಮೇಲೆಯೂ ತಮ್ಮ ವಾತ್ಸಲ್ಯದ ಮಳೆಗರೆದಿದ್ದಾರೆ. ರಾಮನ ಮೇಲೆಯೂ ಅದೇ ವಾತ್ಸಲ್ಯವನ್ನು ತೋರಿದ್ದಾರೆ. ಲಚ್ಚ ನೀಚನಾಗುತ್ತಾನೆ. ರಾಮನು ಸದ್ಗುಣಿಯಾಗುತ್ತಾನೆ ! ನಾಗವೇಣಿ ಮತ್ತು ರಾಮಪಡುವ ಬವಣೆಯು, ಪಾರೋತಿ ಮತ್ತು ಸರಸೋತಿಯರು ಪಡುವ ಬವಣೆಗೆ ಕಡಿಮೆಯದಲ್ಲ. ಹಾಗೆಯೇ ಅವರ ಹೋರಾಟ ಕೂಡ. ರಾಮನ ವ್ಯಕ್ತಿತ್ವದಲ್ಲಿ ಕಾಣುವ ಆತ್ಮಾಭಿಮಾನಕ್ಕೆ ಕೆಲಮಟ್ಟಿಗೆ ಅವನ ತಾಯಿ ನಾಗವೇಣಿಯ ವ್ಯಕ್ತಿತ್ವವೂ ಕಾರಣವಾಗುತ್ತದೆ. ಗಂಡನು ಸಂಸಾರ ನಿಭಾಯಿಸಲಾರ ಎಂದು ತಿಳಿದ ಮೇಲೆ ಅವಳು ತನ್ನ ತಂದೆಯ ಮನೆಯನ್ನು ಸೇರಬಹುದಾಗಿದೆ. ಆದರೆ ಅವಳು ಅದನ್ನು ನಿರಾಕರಿಸಿ ಗೇಣಿಗಾದರೂ ಭೂಮಿಯನ್ನು ಬೇಸಾಯ ಮಾಡಿ ಬದುಕಬೇಕೆಂಬ ಛಲ ತೋರುತ್ತಾಳೆ.

ಒಂದರ ಬೆಳವಣಿಗೆ ಇನ್ನೊಂದರ ಗರ್ಭದಲ್ಲಿ ಅಡಗಿರುವುದೇ ಸೃಷ್ಟಿಕಾರ್ಯದ ಚಮತ್ಕಾರವಲ್ಲವೆ ? ಹಾಗೆಯೇ ತಲೆಮಾರುಗಳ ಕತೆಯನ್ನು ಹೇಳುವಾಗ ಒಂದು ಸ್ವಭಾವ ನಿರ್ಮಾಣದ ಕಾರ್ಯ ಇನ್ನೊಂದು ಸ್ವಭಾವದ ಗರ್ಭದಲ್ಲಿ ಅಡಗಿದೆ ಎಂಬುದನ್ನು ಯಶಸ್ವಿಯಾಗಿ ನಿರ್ವಹಿಸಿದಾಗ ಅಖಂಡ ಕಾದಂಬರಿಯಲ್ಲಿ ಕಾಲದ ಪೋಣಿಸುವ ಅರ್ಥಗಳು ಸ್ಫುರಿಸಲು ಪ್ರಾರಂಭವಾಗುತ್ತವೆ. ಕೇವಲ ತಲೆಮಾರಿನ ಕತೆಗಳನ್ನು ಹೇಳಿ. ವೈರುಧ್ಯಗಳ ಅರಿವಿಲ್ಲದೆ ಬರೆದ ಬರವಣಿಗೆಗಳು ಬೇಕಾದಷ್ಟಿವೆ. ಆದರೆ ಒಂದರ ಬೆಳವಣಿಗೆಯ ಭೂಮಿಕೆ ಇನ್ನೊಂದರ ವರ್ತನೆಯ ಮೇಲಿದೆ ಎಂಬ ಸಂಗತಿಯೇ 'ದೃಷ್ಟಿಕೋನ'ವನ್ನು ನಿರ್ಮಿಸುತ್ತದೆ. ಕಾರಂತರ ಬರವಣಿಗೆಯ 'ದೊಡ್ಡಗುಣ'ವು ಇಂಥ ದೃಷ್ಟಿಕೋನವನ್ನು ಸೃಜನಶೀಲವಾಗಿ ನಿರ್ಮಿಸುವುದರಲ್ಲಿಯೇ ಅಡಗಿದೆ. ಇತಿ–ಮಿತಿಗಳ ಅರಿವು, ಪಾತ್ರ ವೈವಿಧ್ಯದ ಎಚ್ಚರ ಮತ್ತು ಕಥಾವಸ್ತುವಿನಲ್ಲಿ ಇವುಗಳು ಅವಿಭಾಜ್ಯ ಅಂಗಗಳಾಗಿ ಮೆರೆಯುವುದು 'ಮರಳಿ ಮಣ್ಣಿಗೆ' ಕಾದಂಬರಿಯ ಹೆಗ್ಗಳಿಕೆಯಾಗಿದೆ.

ಅವಳ ಈ ಆತ್ಮಾಭಿಮಾನದ ಛಲವೇ ಅವಳ ಮಗನಾದ ರಾಮನ ವ್ಯಕ್ತಿತ್ವವನ್ನು ರೂಪಿಸುತ್ತದೆ. ಮಂಗಳೂರು, ಮದ್ರಾಸುಗಳಲ್ಲಿ ವಿದ್ಯಾಭ್ಯಾಸ ಮುಗಿಸಿ, ಸ್ವಾತಂತ್ರ್ಯ ಹೋರಾಟದ ಬೇಗೆಯಲ್ಲಿ ಬೆಂದು, ಮುಂಬಯಿ ವಾಸದಲ್ಲಿ ಕೆಲಸವನ್ನರಸಿ ಕೊನೆಗೆ 'ಮಣ್ಣಿಗೆ ಮರಳುವ' ರಾಮನ ವ್ಯಕ್ತಿತ್ವದಲ್ಲಿ ಆ ಕಾಲದ ನಮ್ಮ ದೇಶದ ಚರಿತ್ರೆಯೇ ಅಡಗಿದೆ. ಮಹಾಯುದ್ಧಗಳು ಮತ್ತು

ಸ್ವಾತಂತ್ರ್ಯ ಹೋರಾಟಗಳು ಕಾರಂತರ ಕಾದಂಬರಿಗಳ ಕೇಂದ್ರ ವಸ್ತುಗಳಾಗದಿದ್ದರೂ ಅವುಗಳ ಪರಿಣಾಮಗಳು ಮಾತ್ರ ಅವರ ಕೆಲವು ಕಾದಂಬರಿಗಳ ಅವಿಭಾಜ್ಯ ಅಂಗಗಳಾಗಿವೆ. ಇಲ್ಲಿ ರಾಮನು ವ್ಯಾಸಂಗವನ್ನು ತ್ಯಜಿಸಿ ಸ್ವಾತಂತ್ರ್ಯ ಹೋರಾಟಕ್ಕೆ ಧುಮುಕಿ ಕಷ್ಟಪಡುತ್ತಾನೆ. ಸ್ವಾತಂತ್ರ್ಯ ಹೋರಾಟವೆಂಬುದು ಅತಿ ಭಾವುಕ ಮತ್ತು ಅತಿ ಉತ್ಸಾಹದ ದ್ಯೋತಕವಾಗಿ ಕಾರಂತರ ಕೆಲವು ಕಾದಂಬರಿಗಳಲ್ಲಿ ಮೂಡಿ ಬಂದಿದೆ. ಇಲ್ಲಿ ಕೂಡ ಅದರ ಅವಸ್ಥೆಯು ಹಾಗೆಯೇ ವರ್ಣಿತವಾಗಿದೆ. ರಾಮನಂಥ ಬಡವರಿಗೆ ಅದು ಕಷ್ಟವನ್ನೇ ತರುತ್ತದೆ ಒಂದೆಡೆಗೆ ಇನ್ನೊಂದೆಡೆಗೆ ಅದನ್ನು ಬಿಟ್ಟು ಆತನು, ವಿದ್ಯಾಭ್ಯಾಸವನ್ನು ಪೂರೈಸಿದ್ದರೂ ನಿರುದ್ಯೋಗಿಯೇ ಆಗಬೇಕಿತ್ತು ಎಂಬ ಚಿತ್ರಣವಿದೆ. ಈ ವೈರುಧ್ಯವೇ ಭಾರತದ ಆ ಕಾಲದ ಪರಿಸ್ಥಿತಿಯನ್ನು ತಿಳಿಸುತ್ತದೆ. ಇದನ್ನು ರಾಮನ ಬೆಳವಣಿಗೆಯಲ್ಲಿ ಸಬಲವಾಗಿ ಚಿತ್ರಿಸಲಾಗಿದೆ. ರಾಮನ ತಾಯಿ ನಾಗವೇಣಿಗೆ ಮತ್ತು ರಾಮನಿಗೆ ಕಷ್ಟಕಾಲದಲ್ಲಿ ಮತ್ತು ದುಃಖದಲ್ಲಿ ಆಸರೆಯಾಗಿ ನಿಲ್ಲುವ ಇನ್ನೊಂದು ವಿಷಯವೆಂದರೆ ಸಂಗೀತ, ಇಬ್ಬರಿಗೂ ವಯೋಲಿನ್ (ವೀಣೆ) ವಾದನವು ಮನಸ್ಸಿಗೆ ಶಾಂತಿಯನ್ನು ತರುತ್ತದೆ. ಮದ್ರಾಸಿನಲ್ಲಿ ರಾಮನಿಗೆ ಸಂಗೀತ ಪಾಠ ಹೇಳುವ ಮೂಲಕ ಸಂಪಾದನೆಗೆ ದಾರಿಯೂ ಆಗುತ್ತದೆ.

ಮದುವೆಯ ಸಂಭ್ರಮಗಳು ರಾಮನಿಗೆ ಕಡಲನ್ನು ಕುರಿತು ಇರುವ ಗಾಢವಾದ ಪ್ರೀತಿ, ನಾಗವೇಣಿಯ ತಂದೆಯ ವಿಶಾಲವಾದ ಹೃದಯವಂತಿಕೆ, ಅವಳ ಚಿಕ್ಕಪ್ಪನ ಸಜ್ಜನಿಕೆ, ಶೀನಮಯ್ಯನ ಮಧ್ಯಮ ವರ್ಗದವರ ವಿಶಿಷ್ಟ ಹೊಟ್ಟೆಕಿಚ್ಚು ಮತ್ತು ಗುರಿಕಾರರಾಗಬೇಕೆಂಬ ಅವರ ಬಯಕೆ, ಹೋಟೆಲ್ ಉದ್ಯಮದಿಂದಾಗಿ ದಕ್ಷಿಣ ಕನ್ನಡದ ಮೇಲುಂಟಾದ ಪ್ರಭಾವ ಇವುಗಳಿಂದ ಕಾದಂಬರಿಯು ಸೊಕ್ಕಿ ನಿಲ್ಲುವಂತೆ ಮೂಡಿವೆ.

ಈ ಕಾದಂಬರಿಯ ಶಕ್ತಿಯ ಮೂಲವೆಂದರೆ ಅದರ ವಿವರಗಳು. ಈ ವಿವರಗಳೊಡನೆ ಸಮುದ್ರದೊಡನೆ ಬೆರೆತ ಜೀವನದ ಕ್ರಮಗಳು ಇವೆಲ್ಲವೂ 'ಮರಳಿ ಮಣ್ಣಿಗೆ' ಕಾದಂಬರಿಗೆ ವಿವರಗಳಲ್ಲಿ ಪಾತ್ರಗಳನ್ನು ಸ್ಥಾಪಿಸುವ ಅಪೂರ್ವವಾದ ಅವಕಾಶವನ್ನು ಒದಗಿಸಿ ಕೊಡುತ್ತವೆ. ಶೀನಮಯ್ಯನ ದುಷ್ಟತನಕ್ಕೆ ಸಂವಾದಿಯಾಗಿ ನಾಗವೇಣಿಯ ತಂದೆ ಮತ್ತು ಚಿಕ್ಕಪ್ಪನ ಪಾತ್ರಗಳ ಸಜ್ಜನಿಕೆಗಳು ಮೂಡಿ ಬರುತ್ತವೆ. ಸತ್ಯಭಾಮೆಯ ತವರಿನ ಚಿತ್ರದಲ್ಲಿ ವ್ಯಕ್ತವಾಗುವ ಸಜ್ಜನಿಕೆ ಕೂಡ ಈ ಅಂಶಕ್ಕೆ ಪೂರಕವಾಗಿ ನಿಲ್ಲುತ್ತದೆ.

ರಾಮನು ಮಣ್ಣಿಗೆ ಮರಳಲು ಕಾರಣವೇನು ಎಂಬ ಪ್ರಶ್ನೆಗೆ ಶಹರಗಳು ಹುಟ್ಟಿಸುವ ಭ್ರಮನಿರಸನ ಹೇಗೆ ಕಾರಣವೋ ಹಾಗೆಯೇ ರಾಮ ಐತಾಳರು ಹೂತಿಟ್ಟ ನಿಧಿಯೂ

ಕಾರಣವಾಗುತ್ತದೆ, ಹಾಗೆ ದೊರೆತ ನಿಧಿಯಿಂದಾಗಿಯೇ ಕಳೆದುಹೋದ ಆಸ್ತಿಯು ಮತ್ತೆ ದಕ್ಕುತ್ತದೆ, ಅದರಿಂದಾಗಿಯೇ ರಾಮನು ಪುನಃ ತನ್ನ ಹುಟ್ಟೂರಿಗೆ ಮರಳಿ ಸ್ಥಾಪಿತಗೊಳ್ಳಲು ಸಹಾಯವಾಗುತ್ತದೆ,

ಈ ನಿಧಿಯು ಸಿಗದಿದ್ದರೆ ರಾಮನಿಗೆ ಮರಳಿ ತನ್ನ ಊರಿಗೆ ಬರುವ ಸಾಧ್ಯತೆಗಳೇ ಇರಲಿಲ್ಲ. ಇದ್ದರೂ ಕೂಡ ಅವಕಾಶಗಳು ಕಡಿಮೆ. ಹಾಗಾದರೆ ಕಾದಂಬರಿಯು ಒಂದು ರೀತಿಯಲ್ಲಿ ಕೃತ್ರಿಮತೆಯ ಆಧಾರದ ಮೇಲೆ ಕೊನೆಗೊಳ್ಳುತ್ತದೆಯೇ ಎಂಬ ಸಂಶಯವು ಬಾರದೆ ಹೋಗುವುದಿಲ್ಲ. ವಿವರಗಳಿಂದ ತುಂಬಿ ಹೋಗಿರುವ ಈ ಕಾದಂಬರಿಯ ಕೊನೆಯಲ್ಲಿ ನಿಧಿ ಸಿಗುವುದು ಕೂಡ ಅಂಥದೇ ವಿವರದ ಒಂದು ಭಾಗ ಎಂಬಂತೆ ಚಿತ್ರಿತವಾಗುವುದರಿಂದ ಆ ಕೃತ್ರಿಮತೆಯ ಅಪಾಯದಿಂದ ಪಾರಾಗಿದೆ. ಹೀಗೂ ಆಗಬಹುದು ಎಂಬ ಅಂಶ ಕಾದಂಬರಿಯ ವಿವರಗಳ ಗರ್ಭದಲ್ಲಿಯೇ ಅಡಗಿದೆ. ಸಬಲವಾದ ವಿವರಗಳ ಅಭಾವದಲ್ಲಿ ನಿಧಿ ದೊರೆಯುವ ಘಟನೆಯು ಬಹಳ ಕೃತ್ರಿಮವಾಗಿಯೇ ತೋರಬಹುದಿತ್ತು.

ಈ ಕಾದಂಬರಿಯು ವಾಸ್ತವದ ಘಟನೆಗಳನ್ನು ಒಳಗೊಂಡಿದೆ ಜೊತೆಗೆ ಅಂದಿನ ಜನ ಜೀವನ, ಇಂದಿನ ಜನಜೀವನದ ಒಂದು ಉತ್ತಮ ಪರಿಕಲ್ಪನೆಯು ಕೂಡ ಅಡಗಿದೆ.

ಪ್ರಾದೇಶಿಕತೆಯು ಕಾರಂತರ ಅನಿವಾರ್ಯತೆ ಹೇಗೋ ಹಾಗೆಯೇ ಅದು ಅವರ ಶಕ್ತಿಕೂಡ. ಅಖಂಡ ಕಾದಂಬರಿಯೊಂದಕ್ಕೆ ಬೇಕಾದ ಹೆಚ್ಚಿನ ಪರಿಕರಗಳನ್ನು ಮೈಗೂಡಿಸಿಕೊಂಡು ಈ ಕಾದಂಬರಿ ಎದ್ದು ನಿಲ್ಲುತ್ತದೆ. ರಾಮ ಐತಾಳರು ತಂದೆಯ ವೈದಿಕ ವೃತ್ತಿಯನ್ನು ಮುಂದುವರಿಸಿಕೊಂಡು ಹೋಗುತ್ತಿರುವ ಪಾತ್ರ. ಇದು ಕಾದಂಬರಿಯ ಪ್ರಾರಂಭದಲ್ಲಿ ಮುಖ್ಯ ಪಾತ್ರ. ಜಡಿ ಮಳೆಯಲ್ಲಿ ನಡೆಯುವ ಅವರ ಮದುವೆಯ ವರ್ಣನೆಯೊಡನೆ ಕಾದಂಬರಿಯು ಪ್ರಾರಂಭವಾಗುತ್ತದೆ. ರಾಮ ಐತಾಳರ ತಂದೆಯು ಇಂಥ ಜಡಿಮಳೆಯಲ್ಲಿ ಮದುವೆಯನ್ನು ಇಟ್ಟುದುದಕ್ಕೆ ಕಾರಣವೆಂದರೆ ಹೆಚ್ಚಿನ ಜನರು ಮದುವೆಗೆ ಬರಬಾರದೆಂದು ಮತ್ತು ತನ್ಮೂಲಕ ಮದುವೆಯ ಖರ್ಚು ಗಂಡಿನ ಕಡೆಯಿಂದ ಕಡಿಮೆಯಾಗಬೇಕೆಂದು, ರಾಮ ಐತಾಳರ ತಂಗಿ ಸರಸ್ವತಿಯು ವಿಧವೆಯ ರೂಪದಲ್ಲಿ ಮನೆಯಲ್ಲಿದ್ದಾಳೆ. ಮದುವೆಯಾದ ಕೆಲದಿನಗಳಲ್ಲಿ ಐತಾಳರ ತಂದೆ ತೀರಿಕೊಂಡಿದ್ದರಿಂದ ಮನೆಯಲ್ಲಿ ರಾಮ ಐತಾಳರು, ಅವರ ತಂಗಿ ಮತ್ತು ಹೆಂಡತಿ ಪಾರ್ವತಿ ಮಾತ್ರ ಉಳಿದುಕೊಳ್ಳುತ್ತಾರೆ. ಪಾರ್ವತಿ, ಪಾರೋತಿಯಾಗಿಯೂ ಸರಸ್ವತಿ ಸರಸೋತಿಯಾಗಿಯೂ ಕನ್ನಡ ಕಾದಂಬರಿಯ ಲೋಕದ ಶಾಶ್ವತ ಪಾತ್ರಗಳಾಗಿ ಬೆಳೆಯುತ್ತಾರೆ. ಕಾದಂಬರಿಯ ಪ್ರಾರಂಭದಲ್ಲಿ ಬರುವ ಸಂಸಾರದ ಚಿತ್ರಣ ಪ್ರಾಯಶಃ ಕನ್ನಡ ಕಾದಂಬರಿ

ಎನ್ನುವ ರಂಗದಲ್ಲೂ ಕಂಡು ಬಾರದಷ್ಟು ಅದ್ವಿತೀಯವಾಗಿದೆ. ಧಾವಳಿ ಧರಿಸಿ, ಪೌರೋಹಿತ್ಯಕ್ಕೆ ಹೊರಟ ರಾಮ ಐತಾಳರಿಗೆ ಸಂಸಾರದ ಕಡೆ ಗಮನಕೊಡಲು ಸಮಯವೇ ಇಲ್ಲ, ಬೆಳಿಗ್ಗೆ ಹೊರಟರೆ, ಸಂಜೆಗೇ ಬಂದಾರು, ಇಲ್ಲ ಎರಡು ಮೂರು ದಿನ ಬಿಟ್ಟು ಬಂದಾರು. ಅವರ ಮೊದಲಿನ ಹೆಂಡತಿ ಪಾರೋತಿಗೆ ಮಕ್ಕಳಾಗುವುದಿಲ್ಲ. ಹೀಗಾಗಿ ಗಂಡನ ಗೈರು ಹಾಜರಿಯಲ್ಲಿ ಹೆಣ್ಣುಜೀವಗಳೆರಡು ಸಮುದ್ರದಂಡೆಯ ಆ ಶೀತಕಿಯಲ್ಲಿ ಪಡುವ ಪಾಡನ್ನು ಕಾದಂಬರಿಯನ್ನು ವಿಸ್ತಾರವಾಗಿ ಓದಿಯೇ ತಿಳಿಯಬೇಕು. ಪರಿಸರದೊಡನೆ ಅವರ ಒಡನಾಟದಷ್ಟೇ ಕಠೋರವಾಗಿದೆ ಅವರ ಪರಿಶ್ರಮ, ಈ ಒಡನಾಟ ಮತ್ತು ಪರಿಶ್ರಮಗಳು ಕಾದಂಬರಿಯ ಈ ಭಾಗವನ್ನು ಪೂರ್ತಿಯಾಗಿ ಆಕ್ರಮಿಸಿವೆ. ಕಾದಂಬರಿಯು ಸಂಸಾರದ ಪ್ರತಿಯೊಂದು ಸೂಕ್ಷ್ಮವನ್ನು ಸೆರೆಹಿಡಿಯುತ್ತದೆ, ಉರುವಲಿಗಾಗಿ ಆರಿಸುವ ತರಗೆಲೆಗಳು, ಉಪ್ಪಿನಕಾಯಿಗೆ ಮಾವಿನಕಾಯಿ ಅರಸುವ ಸಾಹಸ, ನದಿಯು ಸಮುದ್ರವನ್ನು ಸೇರುವಲ್ಲಿ ನದಿದಾಟುವ ಸಾಹಸ. ನೀರಿನಾಳದಿಂದ ಕೆಸರನನು ಎತ್ತಿ ತಂದು ತರಕಾರಿ ಬೆಳೆಯಿಸಲು ಮಡಿಮಾಡುವ ಸಾಹಸ–ಹೀಗೆ ಒಂದೇ ಎರಡೇ, ವಿವರಗಳಿಂದಲೇ ಹೆಣೆಯಲ್ಪಡುವ ಬಂಧವು ಕಾದಂಬರಿಯ ವಸ್ತುವಿಗೊದಗಿಸುವ ವಿಸ್ತಾರವು ಅಗಾಧತೆಯನ್ನುಂಟು ಮಾಡುತ್ತದೆ.

ಪಾರೋತಿ ಮತ್ತು ಸರಸೋತಿಯರ ಪಾತ್ರಗಳು ಎರಡು ಅಂಶಗಳಲ್ಲಿ ಸಾಹಿತ್ಯಕ ರೂಪವನ್ನು ಪಡೆಯುತ್ತವೆ. ಹೊರನೋಟಕ್ಕೆ 'ಕಷ್ಟ'ವೆಂದು ತೋರುವ ಜೀವನದ ರೀತಿಯನ್ನು ಇಬ್ಬರಿಗೂ ಪರಿಶ್ರಮದ ಮೂಲಕ ಜೀವನೋತ್ಸಾಹವನ್ನಾಗಿ ಮಾರ್ಪಡಿಸಿದ್ದಾರೆ. ಇನ್ನು ತಮ್ಮ ಕಷ್ಟಗಳಿಗೆಲ್ಲ ತಮ್ಮ ಹಿಂದಿನ ಜನ್ಮದ ಕರ್ಮಗಳೇ ಕಾರಣವೆಂಬ ಆಳವಾದ ನಂಬಿಕೆ ಇವರಲ್ಲಿರುವುದರಿಂದ ಇವರು ತಮ್ಮ 'ಕಷ್ಟದ ಬದುಕ'ನ್ನು ಒಪ್ಪಿಕೊಂಡು ಬಿಟ್ಟಿದ್ದಾರೆ. ಪ್ರತಿರೋಧವಿಲ್ಲದೆ ಒಪ್ಪಿಕೊಳ್ಳುವುದು ತಾರ್ಕಿಕವಾಗಿ ಮೂರ್ಖತನವಾಗಿ ಕಂಡರೂ ಆಧ್ಯಾತ್ಮಿಕವಾಗಿ ಮನಸ್ಸಿನ ಶಾಂತಿಯನ್ನು ಕಾಪಾಡುವ ತತ್ವವಾಗಿದೆ. ಈ ತತ್ವವೇ ಪಾರೋತಿ ಮತ್ತು ಸರಸೋತಿಯಂಥವರು ಬಾಳನ್ನು ತಾಳಿಕೊಳ್ಳುವಂತೆ ಮಾಡುತ್ತದೆ. ಅವರ ಜೀವನದ ಚಟುವಟಿಕೆಗಳಲ್ಲಿ ವ್ಯಕ್ತವಾಗುವ ಅನ್ಯೋನ್ಯತೆ ಮತ್ತು ಜೀವನ ನಿಷ್ಠೆಗಳು ಕಾದಂಬರಿಯ ಬೆನ್ನುಲುಬುಗಳು.

ರಾಮ ಐತಾಳರು ತಮ್ಮ ಎರಡನೆಯ ಮದುವೆಯ ಪ್ರಸ್ತಾಪವನ್ನು ಮನೆಯಲ್ಲಿ ತಿಳಿಸದೆ 'ಗುಪ್ತವಾಗಿ' ಮದುವೆಯ ಸಿದ್ಧತೆಗೆ ತೊಡಗುವವರೆಗೆ ಕಾದಂಬರಿಯ ಒಂದು ಅದ್ಭುತ ಮತ್ತು ಬೆರಗುಗೊಳಿಸುವ ಕರಾವಳಿ ಜೀವನದ ಒಂದು ಭಾಗ ಚಿತ್ರಿಸಲ್ಪಟ್ಟಿದೆ. ಈ ಕಾದಂಬರಿಯಲ್ಲಿ

ನಡೆಯುವ ಒಂದೊಂದು ಮದುವೆಯೂ ವ್ಯಕ್ತಿಗಳ 'ವ್ಯಕ್ತಿತ್ವ'ವನ್ನು ತೆರೆದಿಡುವಂಬಂತೆಯೇ ಚಿತ್ರಿತವಾಗಿದೆ. ಅದರೊಡನೆಯೇ ದೋಟುಗಳಲ್ಲಿ ಪಟಾಕಿ ಸಿಡಿಸುತ್ತ ನೀರಿನ ಮೇಲೆ ಸಾಗುವ ದಿಬ್ಬಣದ ದೃಶ್ಯಗಳಂತೂ ಅದ್ಭುತವಾಗಿ ಮೂಡಿಬಂದಿದೆ. ರಾಮ ಐತಾಳರು ಎರಡನೆಯ ಸಲ ಮದುವೆಯಾಗಲು ಕಾರಣವೆಂದರೆ ಅವರ ಪ್ರಥಮ ಮಡದಿ ಪಾರ್ವತಿಯಿಂದ ಮಕ್ಕಳಾಗದಿರುವುದರಿಂದ ಪಾರ್ವತಿ ರಸಿಕಳಲ್ಲ. ಆದರೆ ಸಹನೆಯ ಮೂರ್ತಿ, ಪೂಜನೀಯಳು. ರಾಮ ಐತಾಳರು ಬದುಕುವುದಷ್ಟೇ ಅಲ್ಲ ಅದರಿಂದ ದಕ್ಕುವ ದೈಹಿಕ ದಾರ್ಢ್ಯವನ್ನು ಹೊಂದಿದವರು. ತಾವು ಸತ್ತ ನಂತರ ತಮಗೆ ಪಿಂಡ ಹಾಕುವುದಕ್ಕಾದರೂ ಒಬ್ಬ ಕುಲಪುತ್ರ ಬೇಕೆಂಬ ಆಕಾಂಕ್ಷೆಯು ಅವರಲ್ಲಿ ಪಾರೋತಿಯಲ್ಲಿ ಮತ್ತು ಸರಸೋತಿಯಲ್ಲಿ ಸಹಜವಾಗಿ ಬೆಳೆದಿದೆ ಮತ್ತೆ ಇಲ್ಲಿ ಕರ್ಮಾಂತರಗಳಲ್ಲಿ, ಪುನರ್ಜನ್ಮದಲ್ಲಿ ಮತ್ತು ದೈವ ತಮ್ಮ ಕೈಯಲಿಲ್ಲ ಎಂಬ ನಂಬಿಕೆಗಳಲ್ಲಿ ಕಾದಂಬರಿಯು ಬೇರೂರಿದೆ, ಇವು ಕಾರಂತರ ನಂಬಿಕೆಗಳಲ್ಲಿ, ಅವರ ಸುತ್ತ ಬದುಕಿದ ಜನಗಳ ಮತ್ತು ವಾಸ್ತವತೆಯ ನಿರೂಪಣೆಯಲ್ಲಿ ಪಾತ್ರಗಳಾಗಿ ಪರಿವರ್ತಿತವಾದವರ ನಂಬಿಕೆಗಳು, ಪಾರೋತಿಯು ಬಂಜೆ ಎಂಬ ಕಾರಣವು ರಾಮ ಐತಾಳರ ಎರಡನೆಯ ಮದುವೆಗೆ ಹೇಗೆ ಕಾರಣವಾಗುತ್ತದೋ ಹಾಗೆಯೇ ತಮ್ಮ ಮರಣದ ನಂತರ ತಮಗೆ ಪಿಂಡ ಹಾಕಲು, ಶ್ರಾದ್ಧ ಮಾಡಲು ಮಗನೊಬ್ಬ ಬೇಕು ಎಂಬ ಒಂದು ನಂಬುಗೆಯೂ ಅಷ್ಟೇ ಬಲವಾದ ಕಾರಣವಾಗಿದೆ. ನಂಬಿಕೆಗಳು ಮತ್ತು ಅವುಗಳ ಫಲವಾಗಿ ಒಡಮೂಡುವ ಕ್ರಿಯೆಗಳು ಕಾರಂತರ ಹಲವಾರು ಕಾದಂಬರಿಗಳ ಕಥಾನಕಗಳನ್ನು ನಿಯಂತ್ರಿಸಿವೆ. ಮುಖ್ಯವಾದ ಮಾತೆಂದರೆ ಈ ನಂಬಿಕೆಗಳು ಪರೀಕ್ಷೆಗೆ ಒಳಪಡಬೇಕೆಂದಾಗಲಿ ಅಥವಾ ಅವುಗಳ ಪರ-ವಿರೋಧ ವಹಿಸಿ ಕಾದಂಬರಿ ರಚಿಸಬೇಕೆಂದಾಗಲಿ ಈ ಕಾದಂಬರಿಯ ಉದ್ದೇಶ ಅಲ್ಲವೇ ಅಲ್ಲ. ರಾಮ ಐತಾಳರು ಮತ್ತು ಪಾರೋತಿಯರ ನಂಬಿಕೆಯ ಅಡಿಪಾಯದ ಮೇಲೆಯೇ ರಾಮ ಐತಾಳರ ಎರಡನೇ ಮದುವೆ ನಡೆದರೆ, ಆ ಮದುವೆಯಿಂದ ಮಾನಸಿಕ ವಿಷಮತೆಗೆ ಎಡೆಮಾಡಿಕೊಡದೆ ಬಾಳಿ ಜೀವಿಸುವ ಪಾರೋತಿಯ ಪಾತ್ರವು ಎಷ್ಟೊಂದು ಉದಾತ್ತವಾಗಿ ಬಿಡುತ್ತದೆಂದರೆ, ಕೌಟುಂಬಿಕವಾಗಿ ಬಹು ಮಹತ್ವದ ಘಟನೆಯಾದ ಐತಾಳರು ತಮ್ಮ ಮದುವೆಯ ವಿಷಯವನ್ನು ತಮ್ಮ ಮಡದಿ ಮತ್ತು ತಂಗಿಗೆ ತಿಳಿಸಿಲ್ಲವೆಂಬ ವಿಷಯ ಮಾತ್ರ ವಿರಸಕ್ಕೆ ಕಾರಣವಾಗುತ್ತದೆಯೇ ಹೊರತು, ವಿವಾಹಕ್ಕೆ ವಿರೋಧವಾಗುವುದಿಲ್ಲ ಪುರುಷ ಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಪಾರೋತಿ ಮತ್ತು ಸರಸೋತಿಯರಿಗೆ ಅಂಥಹ ಗೌರವ ಸಲ್ಲಲು ಸಾಧ್ಯವೂ ಇಲ್ಲ.

ಈ ಕಾದಂಬರಿಯುದ್ದಕ್ಕೂ ಪುರುಷ ಪ್ರಧಾನ ಕುಟುಂಬ ವ್ಯವಸ್ಥೆಯ ತಂತಿಯೊಂದು ಅಂತರ್ಗತವಾಗಿ ಹರಿಯುತ್ತಲೇ ಇದೆ. ಈ ವ್ಯವಸ್ಥೆಯಲ್ಲಿ ಸಿಕ್ಕಿ ನರಳುವ ಹಲವಾರು ಮಹಿಳೆಯರ

ಚಿತ್ರಗಳು ಇಲ್ಲಿ ದೊರೆಯುತ್ತವೆ. ಸ್ವಂತ ಅಭಿಪ್ರಾಯಗಳನ್ನು ಹೊಂದುವುದು ಕೂಡ ಕಲ್ಪನೆಗೆ ಮೀರಿದ ವಿಷಯವಾಗಿ ಮಹಿಳೆಗೆ ಕಾಣುವುದು ಈ ವ್ಯವಸ್ಥೆಯ ಒಂದು ಅನಿವಾರ್ಯ ಅಂಶ. ಇಂಥ ನಿರ್ಬಂದಿತ ಸನ್ನಿವೇಶದಲ್ಲಿ ಬದುಕಿಯೂ ಪಾರೋತಿ ಮತ್ತು ಸರಸೋತಿಯರು ಉದಾತ್ತ ಪಾತ್ರಗಳಾಗುತ್ತಾರೆ. ಅವರು ಇಂಥ ಉದಾತ್ತತೆಯನ್ನು ಹೊಂದುವುದು ತಮ್ಮ ಅಂತಃ ಸತ್ವದಿಂದಲೇ ಹೊರತು ತಾವು ಬಾಳಿ ಬದುಕಿದ ವ್ಯವಸ್ಥೆಯಿಂದಲ್ಲ. ಪಾರ್ವತಿಗೆ ತನ್ನ ಗಂಡನ ಎರಡನೇ ಮದುವೆಯಿಂದ ಸಹಜವಾಗಿಯೇ ದುಃಖವಾಗುತ್ತದೆ. ಆ ಮದುವೆಯಲ್ಲಿ ಅವಳು ನಗು ಮುಖದಿಂದಲೇ ಓಡಾಡುತ್ತಾಳೆ. ಅವಳ ಸೀರೆ ಮತ್ತು ಚಿನ್ನಾಭರಣಗಳ ವಿಷಯದಲ್ಲಿ ರಾಮ ಐತಾಳರು ಸಾಕಷ್ಟು ತಾರತಮ್ಯ ತೋರುತ್ತಾರೆ. ಅವರು ಕೊನೆಯವರೆಗೂ ಇಂಥ ತಾರತಮ್ಯ ತೋರುವುದು ತಮ್ಮ ನೈತಿಕ ಹಕ್ಕು ಎಂಬಂತೆಯೇ ವರ್ತಿಸುತ್ತಾರೆ. ಈ ಅಖಂಡ ಕಾದಂಬರಿಯ ಪ್ರಥಮಾರ್ಧದ ಕೇಂದ್ರದಲ್ಲಿರುವ ರಾಮ ಐತಾಳರು ಪುರುಷ ಪ್ರಧಾನ ಕುಟುಂಬ ವ್ಯವಸ್ಥೆಯ ಗುಣಾವಗುಣನ್ನೆಲ್ಲಾ ಮೈಗೂಡಿಸಿಕೊಂಡಿದ್ದಾರೆ. ಮನೆಯ ಪ್ರಾಪಂಚಿಕ ಜವಾಬ್ದಾರಿ ತಮ್ಮದೆನ್ನುವಂತೆ ಅವಿರತವಾಗಿ ತಮ್ಮ ವೃತ್ತಿಯಲ್ಲಿ ಶ್ರಮಿಸುತ್ತಾರೆ. ತಂಗಿಗೆ ಹೆದರುತ್ತಾರೆ. ಏಕೆಂದರೆ ಹೆಚ್ಚಾಗಿ ಹೊರಗೇ ಇರುವ ರಾಮ ಐತಾಳರ ಕೃಷಿ ಕೆಲಸಗಳನ್ನು ತಂಗಿ ಸರಸೋತಿ ನಿಭಾಯಿಸುತ್ತಾಳೆ. ಹಣಕಾಸಿನ ವಿಚಾರವನ್ನು ರಾಮ ಐತಾಳರು ಮನೆಯ ಹೆಂಗಸರೊಡನೆ ಒಂದು ಸಲವು ಪ್ರಸ್ತಾಪಿಸುವುದಿಲ್ಲ. ಇಂಥ ಸನ್ನಿವೇಶದಲ್ಲಿ ನಡೆಯುವ ರಾಮ ಐತಾಳರ ಎರಡನೇ ವಿವಾಹದ ಸಂದರ್ಭದಲ್ಲಿ ಪಾರೋತಿಯ ಮೂಕವೇದನೆಯು ಕಾದಂಬರಿಯಲ್ಲಿ ಮಡುಗಟ್ಟಿ ನಿಲ್ಲುತ್ತದೆ. ಅವಳು ಪ್ರತಿಭಟಿಸಲಾರಳು ಮತ್ತು ತನಗೂ ಪಿಂಡ ಹಾಕುವ ಕುಡಿಯೊಂದು ಮನೆಯಲ್ಲಿ ಬರಬಹುದೆಂಬ ಸಮಾಧಾನದ ಅಂಶ ಬೇರೆ ಅವಳ ದುಃಖಕ್ಕೆ ಆಸರೆಯಾಗಿದೆ. ವೈಚಾರಿಕ ನೆಲೆಯಲ್ಲಿ ಬದುಕಲಾರದ ಹೃದಯವಂತಿಕೆಯ ಚಿತ್ರಣ ಪಾರೋತಿಯಲ್ಲಿದ್ದರೆ ಸರಸೋತಿಯು ಈ ಅಂಶದೊಡನೆ ಅಲ್ಪಸ್ವಲ್ಪ ಪ್ರತಿಭಟನೆಯ ಗುಣಪಡೆದಿದ್ದಾಳೆ. ಅಷ್ಟೆ. ಇವು ಒಂದಕ್ಕೊಂದು ಪೂರಕ ಪಾತ್ರಗಳು ಜೀವನದಲ್ಲಿ.

ರಾಮ ಐತಾಳರ ಎರಡನೆಯ ಮದುವೆಯು ಸತ್ಯಭಾಮೆಯೊಡನೆ ನಡೆಯುತ್ತದೆ. ಪಾರ್ವತಿಯ ಮದುವೆಯು ಜಟಿ–ಜಟಿ· ಮಳೆ ಮಳೆಯಲ್ಲಿ ನಡೆದಿದ್ದರೆ, ಸತ್ಯಭಾಮೆಯ ವಿವಾಹವು ನೀರ ಮೇಲೆ ಹೊರಟ ದಿಬ್ಬಣದ ವಿಶೇಷ ವರ್ಣನೆಯಲ್ಲಿ ನಡೆಯುತ್ತದೆ. ಸತ್ಯಭಾಮೆಯು ಹೆಚ್ಚಿನ ಸಾಮಾಜಿಕ ಅಂತಸ್ತಿಗೆ, ಸೇರಿದವಳು. ಈ ಎರಡನೆಯ ವಿವಾಹವು ಕಾದಂಬರಿಯಲ್ಲಿ ಕೆಲವು ಹೊಸ ವಿಷಯಗಳನ್ನು ಪ್ರಸ್ತಾಪಕ್ಕೆ ತರುತ್ತದೆ. ಮೊದಲನೆಯದಾಗಿ ಈ ಮದುವೆಯ ಮೂಲಕ ಕಾದಂಬರಿಯ ಮುಖ್ಯ ಪಾತ್ರಗಳಲ್ಲಿ ಒಂದಾದ ಶೀನಮಯ್ಯರ

ಪರಿಚಯವಾಗುತ್ತದೆ. ಇವರು ರಾಮ ಐತಾಳರ ಪಕ್ಕದ ತೋಟದ ಒಡೆಯರು ಮತ್ತು ಎರಡನೆಯ ಮದುವೆಯ ಮುಂದಾಳು. ಇದರಿಂದಾಗಿ ರಾಮ ಐತಾಳರ ಮನೆಯ ವಿದ್ಯಮಾನಗಳು ಕ್ರಮೇಣ ಹದಗೆಡುತ್ತವೆ. ಈ ಪಾತ್ರವನ್ನು ಕುರಿತು ಹೇಳಬೇಕಾದದ್ದು ಬಹಳಷ್ಟಿದೆ. ಏಕೆಂದರೆ ಇರುವ ದುಷ್ಟತನಕ್ಕೆ ಕೈಯಿಕ್ಕಿ ಖಳನಾಯಕನಿಗೆ ಬೇಕಾದ ಕ್ರೌರ್ಯದ ಮುಖ್ಯವನ್ನು ಹೊಂದಿಲ್ಲ, ಆದರೆ ಚಿಕ್ಕ ಹಳ್ಳಿಗಳಲ್ಲಿಯ ಕ್ಷುಲ್ಲಕ ಅಹಂಕಾರಗಳು ಎಷ್ಟೆಂದು ಕೇಡು ಬಗೆಯಬಹುದೆಂಬುದಕ್ಕೆ ದ್ಯೋತಕವಾಗಿದ್ದಾರೆ. ಶೀನಮಯ್ಯರ ಪಾತ್ರವು ಕಾರಂತರ ಕಾದಂಬರಿ ಲೋಕದ ಮಹತ್ವದ ಸಾಧನೆಗಳಲ್ಲಿ ಒಂದು ಅವರ ಬೆಳವಣಿಗೆಯು ಕಾದಂಬರಿಯುದ್ದಕ್ಕೂ ಮುಖ್ಯ ಪಾತ್ರಗಳೊಡನೆ ಸಮಾನಾಂತರವಾಗಿಯೇ ನಡೆಯುತ್ತದೆ.

ಸತ್ಯಭಾಮೆಯು ಸ್ವಲ್ಪ ಸಿರಿವಂತರ ಮನೆಯಿಂದ ಬಂದವಳು. ಸತ್ಯಭಾಮೆಯ ತಂದೆ ಶಾನುಭೋಗರ ಮನೆತನದವರು. ಅವರು ರಾಮ ಐತಾಳರ ಜೀವನಕ್ಕೆ ಆಸರೆಯಾಗಿ ನಿಲ್ಲುವ ಶಕ್ತಿಯುಳ್ಳವರು, ಹೀಗಾಗಿ ಸತ್ಯವತಿಯು ರಾಮ ಐತಾಳರ ಮನೆಯಲ್ಲಿ ಮೊದಲ ಮಡದಿ ಪಾರ್ವತಿಗಿಂತ ಹೆಚ್ಚಿನ ಪ್ರಾಶಸ್ತ್ಯ. ಅಕ್ಕರೆ, ಪ್ರೀತಿಗಳನ್ನು ಪಡೆಯುತ್ತ ಹೋಗಿದ್ದಾಳೆ. ಸಾಲದ್ದಕ್ಕೆ ಅವಳಿಂದ ರಾಮ ಐತಾಳರಿಗೆ ಎರಡು ಮಕ್ಕಳಾಗುತ್ತವೆ. ಬಂಜೆಯೆಂಬ ಬಿರುದು ಹೊತ್ತು ನಿಂತು ಮೊದಲೇ ಅಲಕ್ಷ್ಯಕ್ಕೆ ತುತ್ತಾದ ಪಾರ್ವತಿಯು ಮೊದಲ ಮಗು ಹುಟ್ಟಿದ ಮೇಲೆ ದಬ್ಬಾಳಿಕೆ ನಡೆಯುತ್ತದೆಂದು ಊಹಿಸುವ ಕಾರಣವಿಲ್ಲ. ಸರಸೋತಿಯ ಜೀವನ ವಿಧಾನ ಮತ್ತು ಜೀವನ ತತ್ವಗಳನ್ನು ಅರಿತಷ್ಟು ಸುಲಭವಾಗಿ ಪಾರೋತಿಯ ಜೀವನವನ್ನು ಅರಿಯುವುದು ಸುಲಭವಲ್ಲ. ಜೀವನದಲ್ಲಿ ಬಲುಬೇಗ ಗಂಡನನ್ನು ಕಳೆದುಕೊಂಡ ಸರಸೋತಿಗೆ ತನ್ನ ಅಣ್ಣನ ಮೇಲೆ ಸ್ವಲ್ಪ ಬದಲಾವಣೆ ಮಾಡಬಲ್ಲ ಶಕ್ತಿ ಮತ್ತು ಧೈರ್ಯಗಳೆರಡೂ ಅವಳಲ್ಲಿವೆ. ಆದರೆ ಪಾರೋತಿಗೆ ಆ ಸ್ವಾತಂತ್ರ್ಯಗಳಿಲ್ಲ. ಅವಳು ಸರಸೋತಿಯಂತೆ ಮಾತುಗಾರ್ತಿಯಲ್ಲ. ಈ ಎಲ್ಲ ಸ್ವಾಭಾವಿಕ ಬಂಧನಗಳ ನಡುವೆಯೂ ಕೂಡ ಮನಸ್ಸಿನ ಸಮಾಧಾನವನ್ನು ಕಂಡುಕೊಳ್ಳಬಲ್ಲ ಅಭೂತ ಪೂರ್ವವಾದ ಶಕ್ತಿಯೊಂದು ಅವಳಲ್ಲಿದೆ, ಇದ್ದುದರಲ್ಲಿಯೇ ತೃಪ್ತಿಪಡುವ, ಚಿಕ್ಕ ಮನೆಗೆಲಸಗಳಲ್ಲಿಯೂ ಪೂರ್ತಿಯಾಗಿ ತನ್ನನ್ನೇ ತೊಡಗಿಸಿಕೊಳ್ಳುವ ಪಾರೋತಿಯ ಜೀವನ ಕ್ರಮವು ಅಚ್ಚರಿ ಹುಟ್ಟಿಸುವಷ್ಟು ಶುದ್ಧವಾಗಿವೆ ಮತ್ತು ಅಷ್ಟೇ ಶಕ್ತಿಯು ಮೂಡಿ ಬಂದಿದೆ. ಅದು ಪ್ರತಿಭಟನಾರಹಿತ ಜೀವನ ಕ್ರಮವಾದ್ದರಿಂದ ಅದು 'ತ್ಯಾಜ್ಯ' ಎಂದು ಓದುಗನು ನಿರ್ಣಯಿಸಲಾರದಷ್ಟು ಅವಳ ಜೀವನದ ನೇಯ್ಗೆಯಲ್ಲಿ ಒಂದಾಗಿದ್ದಾಳೆ.

ಈ ಎಲ್ಲ ದೃಷ್ಟಿಯಿಂದ ನೋಡಿದಾಗ ಪಾರೋತಿ ಮತ್ತು ಸರಸೋತಿಯರು ಕನ್ನಡ ಕಾದಂಬರಿ ಲೋಕದ ಮರೆಯಲಾಗದ ಪಾತ್ರಗಳು. ಸರಸೋತಿಯ 'ಆಧ್ಯಾತ್ಮ' ಮತ್ತು ಪಾರೋತಿಯ 'ಸಮಾಧಾನ' ಇವು ಒಂದಕ್ಕೊಂದು ಪೂರಕವಾಗಿ ಬೆಳೆಯುತ್ತಿವೆ. ರಾಮ ಐತಾಳರ ಎರಡನೆಯ ಮಡದಿ ಸತ್ಯಭಾಮೆಯ ಪಾತ್ರಕ್ಕೆ ಬೆಳವಣಿಗೆಯ ಎರಡು ಹಂತಗಳಿವೆ. ಮದುವೆಯಾಗಿ ಬಂದ ಹೊಸದರಲ್ಲಿ ಮಗುವಿಗೆ ಜನ್ಮ ನೀಡುತ್ತಾಳೆ. ಗಂಡು ಮಗುವಿನ ತಾಯಿಯಾದ ಸಂಭ್ರಮ ಅವಳಿಗೆ ಇನ್ನೂ ಹೆಚ್ಚಿನ ಮಹತ್ವವನ್ನು ಈ ಮನೆಯಲ್ಲಿ ನೀಡುತ್ತದೆ, ಅದರೊಡನೆಯೇ ತನ್ನ ಮಗು ಬೆಳೆದಂತೆ, ತನಗಿಂತ ಹೆಚ್ಚಾಗಿ ದೊಡ್ಡಮ್ಮನಾದ ಪಾರ್ವತಿಗೇ ಅಂಟಿಕೊಂಡಿರುವುದು ಸತ್ಯಭಾಮೆಯಲ್ಲಿ ಮತ್ಸರವನ್ನುಂಟು ಮಾಡುತ್ತದೆ. ಈ ಮತ್ಸರಕ್ಕೆ ಗುರಿಯಾಗುವ ಪಾರೋತಿಯು ಉದಾತ್ತವಾಗುತ್ತ ಹೋದಂತೆ ಕಾದಂಬರಿಯ ಈ ಭಾಗದಲ್ಲಿ ಸತ್ಯಭಾಮೆಯು ಕೀಳಾಗುತ್ತ ಹೋಗುತ್ತಾಳೆ. ಅವಳ ಮಗ ಲಕ್ಷ್ಮಿನಾರಾಯಣ ಅಥವಾ ಲಚ್ಚನು ಬೆಳೆದಂತೆ ಹಿಡಿಯುವ ದುರ್ಮಾರ್ಗ ಮತ್ತು ರಾಮ ಐತಾಳರ ಸಾವು ಇವು ಸತ್ಯಭಾಮೆಯ ಎರಡನೆಯ ಹಂತಕ್ಕೆ ಕಾರಣವಾಗುತ್ತವೆ. ಅವಳ ಪ್ರೌಢಿಮೆ ಮತ್ತು ಮಾಗುವಿಕೆಗೆ ಮಗನ ಮೇಲಿಟ್ಟ ಆಸೆಯು ನಿರಾಶೆಯಾಗುವುದು ಹೇಗೆ ಕಾರಣವೋ ರಾಮ ಐತಾಳರ ಅಕಾಲಿಕ ಸಾವು ಅಷ್ಟೇ ಮುಖ್ಯ ಕಾರಣವಾಗುತ್ತದೆ. ನಿರಾಶೆ ಮತ್ತು ಮರಣಗಳು ಸತ್ಯಭಾಮೆಯ ಪ್ರೌಢಿಮೆಯು ಅವಳಿಗೆ ಪಾರ್ವತಿ ಮತ್ತು ಸರಸೋತಿಯ ಉದಾತ್ತತೆಯನ್ನು ಅರಿಯಲು ಸಹಾಯ ಮಾಡುತ್ತದೆ. ಕಾದಂಬರಿಯ ಈ ಅಂಶವು ಬಹಳ ಗಣನೀಯವಾಗಿದೆ. ಏಕೆಂದರೆ ವೈಚಾರಿಕ ನೆಲೆಯಿಂದ ಸಾಧಿಸಲಾರದ್ದನ್ನು ಜೀವನ ಅನುಭವಗಳು ಮಾನವನಿಗೆ ಹೇಗೆ ಒದಗಿಸಿಕೊಡುತ್ತವೆ ಎಂಬುದಕ್ಕೆ ಇದೊಂದು ಅತ್ಯುತ್ತಮ ಉದಾಹರಣೆ. ಸಾಹಿತಿಯಾದವನೂ ಇಂಥ ಸೂಕ್ಷ್ಮಗಳಿಗೆ ತನ್ನನ್ನೂ ಎಚ್ಚರಗೊಳಿಸಿಕೊಂಡಿದ್ದಾರೆ.

ಒಲೆಯ ಎದುರು ಕುಳಿತು ಹಸಿಕಟ್ಟಿಗೆಯನ್ನು ಊದಿ ಹೊಗೆಯಿಂದ ಕಣ್ಣು ಕೆಂಪಾಗಿಸಿಕೊಳ್ಳುವ ಪಾರ್ವತಿಯ ಕಣ್ಣುಗಳಾಗಲೀ, ಏರುಕಟ್ಟಿ ಹಾಕಿ ದುಡಿಯುವ ಸರಸೋತಿಯಾಗಲಿ ಬಾಯಿಬಿಟ್ಟು ತಮ್ಮ ಅಂತರ್ಯವನ್ನು ವರ್ಣಿಸಲಾರರು. ಅವರನ್ನು ಅಂಥವರನ್ನು ಅವರ ಜೀವನದ ಘಟನೆಗಳಿಂದಲೇ ಅರ್ಥ ಮಾಡಿಕೊಳ್ಳಬೇಕು. ಹಾಗೆ ಅರ್ಥ ಮಾಡಿಕೊಳ್ಳಬೇಕಾದರೆ, ಅರ್ಥ ಮಾಡಿಕೊಳ್ಳುವವರ ಮನಸ್ಸಿಗೆ ಒಂದು ರೀತಿಯ ಹದಬೇಕು. ಅಂಥಹದ ಬರುವುದು ಕಷ್ಟ ಕಾರ್ಪಣ್ಯಗಳಿಂದ ಇಂಥ ಒಂದು ವಿಶೇಷ ತತ್ವವನ್ನು ಸತ್ಯಭಾಮೆಯ ಜೀವನದ ಏರಿಳಿತಗಳ ಮೂಲಕ ಚಿತ್ರಿಸಿದ್ದಾರೆ ಎಂದು ಕಾದಂಬರಿ ಓದುತ್ತ ಹೋದರೆ ಗೊತ್ತಾಗುತ್ತದೆ.

ರಾಮ ಐತಾಳರು ಸಾತ್ವಿಕರಾಗಿದ್ದಾರೆ, ಪಾರೋತಿ, ಸರಸೋತಿಯರು ಪಾಪದ ಸೋಂಕಿಲ್ಲದಂತೆ ಬದುಕಿದ್ದಾರೆ. ಸತ್ಯಭಾಮ ಕೂಡ ದುಷ್ಟತನದ ಲೇಪನದಿಂದ ದೂರವಿದ್ದಾಳೆ. ಆದರೂ ಕೂಡ ಆ ಮಸಿಯಲ್ಲಿ ಲಚ್ಚನಂಥ ಧೂರ್ತನ ಮತ್ತು ದುಷ್ಟನ ಜನ್ಮವಾಗುತ್ತದೆ. ಅವನಿಗೆ ಕುಮ್ಮಕ್ಕು ಕೊಡಲು ಸೀನಮಯ್ಯರಂಥ ಗೋಮುಖ ವ್ಯಾಘ್ರಗಳು ಸೃಷ್ಟಿಯಾಗುತ್ತಾರೆ.

ಸರಸೋತಿ, ಪಾರೋತಿಯರನ್ನು ನಿರ್ಮಿಸಿದ ಆ ಭಗವಂತನೇ ಲಚ್ಚ ಮತ್ತು ಸೀನಮಯ್ಯರನ್ನೂ ನಿರ್ಮಿಸಿದನೆ ಎಂದು ಕೇಳಬೇಕೆನಿಸುತ್ತದೆ. ಪಾರೋತಿ, ಸರಸೋತಿಯರ ಉದಾತ್ತ ಭಾವ ಎಷ್ಟೊಂದು ನಿಖರವಾಗಿ ಮತ್ತು ಆಳವಾಗಿ ಕಾದಂಬರಿಯಲ್ಲಿ ಮೂಡಿ ಬಂದಿದೆಯೋ ಅಷ್ಟೇ ಆಳವಾಗಿ ಅವರ ಮನೆತನದ ವಂಶದಕುಡಿ ಲಚ್ಚನ ಪಾತ್ರದ ದುಷ್ಟತನ ಮತ್ತು ಲಜ್ಜೆಗೇಡಿತನಗಳೂ ಮೂಡಿ ಬಂದಿವೆ. ರಾಮ ಐತಾಳರನ್ನೂ ಸೀನಮಯ್ಯರು ದ್ವೇಷಿಸಲು ಕಾರಣವೇನು ಎಂದು ಕೇಳಿದರೆ ಅದಕ್ಕೆ ಮನುಷ್ಯ ಸ್ವಭಾವ ಎಂಬ ಉತ್ತರವನ್ನು ಬಿಟ್ಟು ಬೇರಿನ್ನೇನೂ ಹೇಳಲು ಸಾಧ್ಯವಿಲ್ಲ. ಲಚ್ಚನ ಬಾಲ್ಯವು ಅಕ್ಕರೆಯಲ್ಲಿಯೇ ಕಳೆಯುತ್ತದೆ. ತಾತನ ಮನೆಯಲ್ಲಿ ನಡೆಯುವ ವಿದ್ಯಾಭ್ಯಾಸದ ಸಮಯದಲ್ಲಿಯೂ ಕೊರತೆಯಿಲ್ಲ. ಮುಂದೆ ಉಡುಪಿಯಲ್ಲಿ ನಡೆಯುವ ಆತನ ವ್ಯಾಸಂಗಕ್ಕೂ ಹಣ ಒದಗಿಸಲಾಗುತ್ತದೆ. ಆದರೆ ಆತನು ಓದಿನಲ್ಲಿ ಮುಂದಿದ್ದರೂ ನೈತಿಕವಾಗಿ ಅಧಃಪತನವನ್ನು ಹೊಂದುತ್ತಲೇ ಹೋಗಿ ತನ್ನ ಮನೆಗೇ ಒಂದು ಶಾಪವಾಗುತ್ತಾನೆ. ರಾಮ ಐತಾಳರ ದ್ವಿತೀಯ ಮದುವೆಯ ನೇತೃತ್ವ ವಹಿಸಿದ ಶೀನಮಯ್ಯರು, ಅವರಿಂದಲೇ ಸಾಲ ಪಡೆದು ಅವರಿಗೇ ತಿರುಗಿ ಬಿದ್ದು, ಅವರೊಡನೆ ಜೀವನವಿಡೀ ವಿನಾಕಾರಣ ದ್ವೇಷ ಸಾಧಿಸುತ್ತಾರೆ. ವೈದಿಕ ಬ್ರಾಹ್ಮಣನೊಬ್ಬನ ಬಳಿ ಹಣವಿರುವುದು ಶೀನಮಯ್ಯರಿಗೆ ಸಹನವಾಗುವುದಿಲ್ಲ. ಹೀಗೆ ಮನುಷ್ಯನ ದುಷ್ಟತನ, ಹೀನ ಭಾವನೆಗಳು, ಉದಾತ್ತ ಬದುಕು, ಬದುಕಿನ ಮಾಗುವಿಕೆ ಇವೆಲ್ಲವೂ ಒಂದೇ ಜೀವನ ವೃಕ್ಷದ ಕೊಂಬೆಗಳೊ ಎಂಬಂತೆ ಅವಿನಾಭಾವ ಸಂಬಂಧಗಳನ್ನಿಟ್ಟುಕೊಂಡು ಚಿಗುರಿ ಬೆಳೆಯುತ್ತವೆ.

ಕಾರಂತರ ಮನಸ್ಸು ಕಾದಂಬರಿಯ ಹೊರವಲಯದಲ್ಲಿ ಸದಾ ಕಾರ್ಯ ಕಾರಣಗಳ ಸಂಬಂಧವನ್ನು ಅರಸಿದಂಥ ಮನಸ್ಸು. ಆದರೆ ಕಾದಂಬರಿಯ ಪರಿಧಿಯಲ್ಲಿ ಅದೂ 'ಮರಳಿ ಮಣ್ಣಿಗೆ' ಕಾದಂಬರಿಯಂಥ ಸಾಹಿತ್ಯದ ಪರಿಧಿಯಲ್ಲಿ ಆ ಮನಸ್ಸು ಸಿಲುಕಿದೊಡನೆ ಆ ಕಾರ್ಯ ಕಾರಣಗಳ ಹುಡುಕಾಟದ ಹುರುಪು ಮಾಯವಾಗಿ, ಜೀವನದ ಅಗಾಧತೆ ಮತ್ತು ಅನ್ಯೋನ್ಯತೆಗಳತ್ತ ಹೊರಳುತ್ತದೆ. ಈ ಕಾರಣಕ್ಕಾಗಿಯೇ ಲಚ್ಚನಂಥ ಅದ್ಭುತವಾದ ಪಾತ್ರದ

ನಿರ್ಮಾಣ ಸಾಧ್ಯವಾಗಿದೆ. ಲಚ್ಚನ ಬೆಳವಣಿಗೆಯನ್ನು ಗಮನಿಸಿದರೆ, ಅವನಲ್ಲಿ ಬೆಳೆಯುವ ವಿಷಬೀಜಗಳಿಗೆ ಉಚಿತವಾದ ಕಾರಣಗಳನ್ನು ಕಂಡು ಹಿಡಿಯುವುದು ಕಷ್ಟ.

ಸಾಹಿತ್ಯ ಮತ್ತು ಸಮಾಜ ಇವುಗಳ ಸಂಬಂಧ ಬಹಳ ಸಂಕೀರ್ಣವಾದುದು ಯಾವುದೇ ಸಮಾಜದಲ್ಲಿ ಉತ್ಪಾದನೆಯ ಸಂಬಂಧಗಳು ಬದಲಾದಂತೆ ಸಾಮಾಜಿಕ ಸಂರಚನೆಯೂ ಬದಲಾವಣೆ ಹೊಂದುತ್ತದೆ. ಆಗ ಸಾಮಾಜಿಕ ಮೌಲ್ಯಗಳೂ ಬದಲಾವಣೆ ಹೊಂದುತ್ತವೆ. ಹೀಗೆ ಸಾಮಾಜಿಕ ಮೌಲ್ಯ-ಸಂರಚನೆಗಳಿಗೆ ತಕ್ಕಂತೆ ಕುಟುಂಬದ ಸದಸ್ಯರು ಸ್ಪಂದಿಸುತ್ತಾರೆ. ಅದು ಜೀವನ ಕ್ರಮದ ವಾಸ್ತವವೂ ಕೂಡಾ. ಈ ದೃಷ್ಟಿಯಲ್ಲಿ ಕಾರಂತರ ಕಾದಂಬರಿಗಳಲ್ಲಿ ಕಂಡು ಬರುವ ಸ್ತ್ರೀ ಪಾತ್ರಗಳು ಕೌಟುಂಬಿಕ ಜವಾಬ್ದಾರಿಯ ಮೂರ್ತ ಸ್ವರೂಪದವರಾಗಿದ್ದಾರೆ. ಏಕೆಂದರೆ 'ಸ್ತ್ರೀ' ಎಂದರೆ ಗರ್ಭ, ಹೆರಿಗೆ ಎಂಬ ತಿಳುವಳಿಕೆಯಲ್ಲಿ ತಾಯ್ತನವೇ ಸ್ತ್ರೀತನ ಎನ್ನುವ ಮಟ್ಟದ ವೈಭವೀಕರಣ ಬೆಳೆದದ್ದು, ಗಂಡನಾದವನು ಹೆಂಡತಿಯಿಂದ ನಿರೀಕ್ಷಿಸುವುದು. ಈ ತಾಯ್ತನವನ್ನು ಎಂಬ ಪ್ರತೀತಿಯು ಸ್ತ್ರೀತ್ವದ ಬಂಜೆತನಕ್ಕೆ ಕಾರಣವಾಗಿದೆ. ಹಾಗೆಯೇ 'ಸ್ತ್ರೀತ್ವ'ವನ್ನು ಸೀಮಿತ ಅರ್ಥಗಳಿಂದ ನಿರ್ವಚಿಸುವುದರಿಂದ ನಿಜವಾದ ಸ್ತ್ರೀತ್ವ ಎಂಬ ಅರ್ಥ ಸಾಹಿತ್ಯದಲ್ಲಿ ಗೈರುಹಾಜರಾಗಿದೆ.

ಮಾತೃ ಪ್ರಧಾನ ಕುಟುಂಬದ ಅಧಿಕಾರವನ್ನು ಸ್ತ್ರೀಯು ಹೊಂದಿರುವಂತೆ ಸಹಜವಾಗಿ ಕಾರಂತರು ತಮ್ಮ ಕಾದಂಬರಿಗಳಲ್ಲಿ ಸ್ತ್ರೀಯರಿಗೆ ಸಾಮಾಜಿಕ, ಕೌಟುಂಬಿಕ ಹೊಣೆಗಾರಿಕೆಯನ್ನು ಹೆಚ್ಚಿಸಿದ್ದಾರೆ. ಕುಟುಂಬ ಸಂರಕ್ಷಣೆಯ ನೆಲೆಯಿಂದ ಸ್ತ್ರೀಯರು ತಮ್ಮ ಕರ್ತವ್ಯ ಪಾಲನೆಯನ್ನು ಮಾಡುತ್ತಾರೆ. ಅವರಿಗೆ ಯಾವುದೇ ರೀತಿಯ ಆಜ್ಞೆಯಾಗಲೀ, ಆಪ್ತ ಸಲಹೆಗಳಾಗಲೀ ಮುಖ್ಯವಾಗುವುದಿಲ್ಲ,

'ಮರಳಿ ಮಣ್ಣಿಗೆ'ಯಲ್ಲಿ ರಾಮೈತಾಳರ ಹೆಂಡತಿ ಪಾರೋತಿ, ಐತಾಳರ ತಂಗಿ ವಿಧವೆ ಸರಸೋತಿಯರು ತಮ್ಮ ಕರ್ತವ್ಯ ಪ್ರಜ್ಞೆಯಿಂದ ವಿಮುಖರಾಗದೇ ಕೌಟುಂಬಿಕ ಜವಾಬ್ದಾರಿ ನಿರ್ವಹಿಸುತ್ತಾರೆ. ಸರಸೋತಿ-ಪಾರೋತಿಯರ ನಿತ್ಯಕಾಯಕವೆಂದರೆ, ಬೆಳಗಿನ ಜಾವಕ್ಕೆ ಏಳುವುದು, ಕಸ ಮುಸುರೆ ಕೆಲಸ ಮುಗಿಸುವುದು. ಹಟ್ಟಿಯಲ್ಲಿ ದನ-ಕರುಗಳ ಚಾಕರಿ, ದನಗಳನ್ನು ಅರಾಲಿಗೆ ಮೇಯಲು ಅಟ್ಟುವುದು. ದನದ ಕೊಟ್ಟಿಗೆಯನ್ನು ಸ್ವಚ್ಛಗೊಳಿಸುವುದು. ನಂತರ ಹೊಲಗೆಲಸಗಳಿಗೆ ಹೋಗುವುದು: ಮಳೆಗಾಲದಲ್ಲಿ ಉರುವಲು ಸಂಗ್ರಹಿಸುವುದು. ಇಂಥ ಅನೇಕ ಕಷ್ಟಗಳನ್ನು ಎದುರಿಸುತ್ತಾರೆ. ಕರಾವಳಿಯ ಭೀಕರ ಮಳೆಗಾಲದಲ್ಲಿ ಒದ್ದೆ ಎಲೆಗಳಿಂದ ಮನೆಯೆಲ್ಲಾ ಹೊಗೆ, ಕಣ್ಣು ತುಂಬ ಉರಿ-ಈ ಕಾರಣಗಳಿಂದ ಕಾರಂತರೇ ಹೇಳುವಂತೆ, ಈ

ಹೊಗೆಯ ಕಾಟದಿಂದ ಪಾರ್ವತಮ್ಮನ ಕಣ್ಣು ಸದಾ ಕಿಸಾರ ಹೂವೇ. ಅದಕ್ಕೆ ಮಲ್ಲಿಗೆಯ ಬಣ್ಣ ಬಂದುದೇ ಇಲ್ಲ' ಎಂದು ಪಾರೋತಿಯ ನಿತ್ಯಕಾಯಕವನ್ನು ಪರಿಚಯಿಸುತ್ತಾರೆ.

ರಾಮ ಐತಾಳರ ಸಂಸಾರದಲ್ಲಿ ಇಡೀ ಕುಟುಂಬದ ಭಾರ ಹೊತ್ತುಕೊಂಡವರೆಂದರೆ ಸರಸೋತಿ–ಪಾರೋತಿಯರು, ಆದರೆ ರಾಮ ಐತಾಳರ ಹೊಣೆಗಾರಿಕೆ ಮಾತ್ರ ಇಬ್ಬರು ಅತ್ತಿಗೆ–ನಾದಿನಿಯರದು.

ಹಾಗೆ ನೋಡಿದರೆ, 'ಅವರ ಹೆಂಡತಿಯಾದ ಪಾರ್ವತಿ ಮೊದಲಿನಿಂದಲೂ ಪಾರೋತಿ ಎನಿಸಿಕೊಂಡು ಬಂದವಳು. ಮನೆಯ ಎಲ್ಲ ಹೊರೆ ತನ್ನದೆಂದು ತಿಳಿಯುವುದು ತೀರ ಸ್ವಾಭಾವಿಕ. ಅದರಲ್ಲೂ ಮಳೆಗಾಲ ಬಂತೆಂದರೆ, ಎಲ್ಲೆಲ್ಲೂ ಹರಡಿರುವ ನೀರಿನ ಹಾಳೆಗಳೆಲ್ಲವೂ ಅವಳ ಕಣ್ಣಿಗೆ ಅವಳ ಜೀವನದ ಇತಿಹಾಸವನ್ನು ತಿಳಿಸುತ್ತವೆ. ತನ್ನ ಮದುವೆಯ ಸಮಯದಿಂದ, ಮಳೆ, ಮಳೆಗಾಲಗಳು ಅವಳ ಮನಸ್ಸಿನಲ್ಲಿ ಅಚ್ಚೊತ್ತಿ ಹೋಗಿವೆ. ಮದುವೆಯ ಗಳಿಗೆಯಿಂದ ತೊಡಗಿ ಸಂಸಾರದ ಪ್ರತಿಯೊಂದು ಗಳಿಗೆಯ ನೆನಪು ಅವಳಿಗೆ ಅದರಿಂದಲೇ ಆಗುತ್ತದೆ, ತನ್ನ ಜೀವನದ ಇಳಿತಗಳೆಲ್ಲ ಅವಳಿಗೆ ಈ ಮಳೆಗಾಲದ ಉಕ್ಕಿನೊಂದಿಗೆ ಹೊಂದಿಕೊಂಡು ಕಾಣಿಸುತ್ತವೆ. ಕೊನೆಗೆ ಒಮ್ಮೊಮ್ಮೆ ಒಂದೊಂದನ್ನೇ ನೆನದು 'ಮನುಷ್ಯರಾಗಿ ಹುಟ್ಟಿ ಫಲವೇನು?' ಅನಿಸುವುದು, ಈಗಲೂ ಅವಳಿಗೆ ಕಣ್ಮುಂದೆ ಕಾಣಿಸಿದ ಪ್ರಶ್ನೆ ಅದೆ ಹಗಲು, ರಾತ್ರಿಗಳೂ ದುಡಿಯುವುದಾಯಿತು' ಎಂಬ ಮಾತಿನಲ್ಲಿ ಪಾರ್ವತಿಯು ಹೇಗೆ ಪ್ರಕೃತಿಯೊಂದಿಗೆ ಬೆಸೆದು ಕೊಂಡಿದ್ದಾಳೆಂಬ ಅಂಶ ದಟ್ಟವಾಗುತ್ತದೆ. ಜೊತೆಗೆ ಕುಟುಂಬದ ಜವಾಬ್ದಾರಿಯೂ ಕೂಡಾ. ಪಾರ್ವತಿಯು ಈ ಪ್ರಕೃತಿಯ ಜೊತೆಗೆ ತನ್ನ ಜೀವನವನ್ನು ಸಮೀಕರಿಸಿ ಮಾತನಾಡಿಕೊಳ್ಳುವುದು ಸಹಜವಾದ ಸಂಗತಿಯಾಗಿದೆ.

ಮಾನವನ ಬದುಕಿನ ಬಗ್ಗೆ ಯೋಚಿಸುತ್ತಾ ಆಕೆ ಮನುಷ್ಯರಾಗಿ ಹುಟ್ಟಿ ಫಲವೇನು? ಎಂಬ ಮಾರ್ಮಿಕವಾದ ಪ್ರಶ್ನೆಯನ್ನು ತನಗೆ ತಾನು ಕೇಳಿಕೊಳ್ಳುತ್ತಾಳೆ. ಇದರಿಂದ ಪಾರೋತಿಯ ಮನಸ್ಸಿನ ತುಮುಲವೆಂದರೆ, ತಾನು ಎಲ್ಲರಂತೆ ತಾಯಿಯಾಗಿ ಮಗುವನ್ನು ಪಡೆಯುವ ಭಾಗ್ಯ ಪ್ರಾಪ್ತಿಸಲಿಲ್ಲವೆಂಬ ಕೊರಗನ್ನು ಪ್ರಕಟಿಸುತ್ತಾಳೆ, ಜೀವನದುದ್ದಕ್ಕೂ ತಾನೆ ಬಂಜೆಯಾಗಿ ಬದುಕಬೇಕೆಂಬ ನಿರಾಸೆಯನ್ನು ವ್ಯಕ್ತಪಡಿಸುತ್ತಾ, 'ಸಂಸಾರಕ್ಕೆ ಬಂದು ಬಂಜೆಯಾಗಿ ಸಾಯಬೇಕೆ?' ಎಂದು ಆಗಾಗ ತನ್ನ ಸ್ವಗತದಲ್ಲಿ ಅದನ್ನು ವ್ಯಕ್ತಪಡಿಸುತ್ತಾಳೆ.

ಏಕೆಂದರೆ ತಾಯ್ತನದ ಹಂಬಲ ಪ್ರತಿಯೊಬ್ಬ ಸ್ತ್ರೀಯ ಸಹಜ ಗುಣವಾಗಿದೆ. ಹಾಗೆ ಸಾಮಾಜಿಕ ನಡವಳಿಕೆಯಂತೆ ಬಂಜೆಯರು 'ಅಮಂಗಳ'ವೆಂಬ ಪಟ್ಟಕಟ್ಟಿರುವುದರಿಂದ

ಇದೊಂದು ಸಾಮಾಜಿಕ ಮೌಢ್ಯವೆಂದೇ ಪರಿಗಣಿಸಬೇಕು. ಪುರುಷ ಪ್ರಧಾನ ಸಮಾಜದಲ್ಲಿ ಸ್ತ್ರೀಯನ್ನು ಮಾತ್ರ ಬಂಜೆಯೆಂದು, ಪುರುಷನ ದೈಹಿಕ ನ್ಯೂನತೆಯನ್ನು ಮಾತ್ರ ಮರೆ ಮಾಚಲಾಗುತ್ತಿದೆ, 'ಬಂಜೆತನ'ವೆಂಬುದು ಸ್ತ್ರೀ-ಪುರುಷರ ಮಾನೋ-ದೈಹಿಕ ಪ್ರಕ್ರಿಯೆಯಾಗಿದ್ದು ಇದಕ್ಕೆ ಯಾವುದೇ ಕರ್ಮದ ಕಲ್ಪನೆಯು ಕಾರಣವಾಗಿಲ್ಲ. ಇದು ಪ್ರಾಕೃತಿಕವಾದ ದೋಷವೇ ಹೊರತು; ಇತರರಿಂದ ಆರೋಪಿಸಲ್ಪಡುವುದಲ್ಲ. ಆದ್ದರಿಂದಲೇ ಪಾರೋತಿಯು ತನ್ನ ಬಂಜೆತನವನ್ನು ಸತ್ಯಭಾಮೆಯ ಮಗ ಲಚ್ಚನ ಮೂಲಕ ಮಡಿಲನ್ನು ತುಂಬಿಕೊಂಡು ತಾಯ್ತನವನ್ನು ಕಂಡುಕೊಳ್ಳುತ್ತಾಳೆ. ಆಕೆ ಲಚ್ಚನೇ ತನ್ನ ಮಗನೆಂದು ಭಾವಿಸಿ ತನ್ನ ದುಃಖವನ್ನು ಮರೆಯುವ ವಿಶಾಲ ಮನೋಭಾವವನ್ನು ಪಾರೋತಿಯಲ್ಲಿ ನಾವು ಗಮನಿಸಬಹುದು.

'ಮರಳಿ-ಮಣ್ಣಿಗೆ'ಯ ಕಾದಂಬರಿಯಲ್ಲಿ ಸರಸೋತಿಯೂ ಕೂಡಾ ಬಾಲ್ಯ ವಿಧವೆಯಾಗಿ, ಆಜನ್ಮ ಪರ್ಯಂತ ವಿಧವೆಯಾಗಿಯೇ ಬದುಕನ್ನು ಸವೆಸಿದವಳು. ರಾಮ ಐತಾಳರಿಗೆ ತಂಗಿಯಾದರೂ ಸರಸೋತಿ ಅಣ್ಣನಿಗೆ ಆಗಾಗ ಮಾರ್ಗ ದರ್ಶನ ಮಾಡುವ ಮೇಲ್ಮಟ್ಟದ ವ್ಯಕ್ತಿತ್ವ ಈಕೆಯದು, ಪ್ರತಿ ನಿತ್ಯ ಅಚ್ಚುಕಟ್ಟಾದ ಮನೆಗೆಲಸ ಪಾರೋತಿಯೊಂದಿಗೆ ಹೊಲದ ಕೆಲಸ. ಮಹಾಕಡಲಿನ ನೀರಿನೊಂದಿಗೆ ಜೀವನದ ಹಂಗು ತೊರೆದು ಸೌದೆ ಹಿಡಿವ ಕಾಯಕ, ಬೇಸಿಗೆಯಲ್ಲಾದರೆ ಉಪ್ಪಿನಕಾಯಿ, ಹಪ್ಪಳ, ಸಂಡಿಗೆಗಾಫಿ ಬಿಸಿಲು-ಬೇಗೆ ತಿಳಿಯದೇ ಊರೂರು ಅಲೆದು ನೆಲ್ಲಿಕಾಯಿ, ಮಾವಿನ ಮಿಡಿ, ಸಂಗ್ರಹಿಸುವ ಅಪಾರ ಪರಿಶ್ರಮ ಇತ್ಯಾದಿ-ಈಕೆಯ ನಿರಂತರ ಬುದಕಿನ ಶ್ರಮದ ಫಲವಾಗಿಯೇ ಐತಾಳರ ಮನೆಯ ವ್ಯಾವಹಾರಿಕ-ಆರ್ಥಿಕ ಜಗತ್ತು ಸುಸ್ಥಿರವಾಗಿದೆ. ಐತಾಳರಾಗಲೀ, ಪಾರೋತಿಯಾಗಲೀ ಮಾನಸಿಕವಾಗಿ ನೊಂದಾಗ ಅವರ ಮನಸ್ಸಿಗೆ ಸಾಂತ್ವನ ನೀಡುವ 'ಶಾಂತಮೂರ್ತಿ'ಯಾಗಿ ಸರಸೋತಿ ಚಿತ್ರಿಸಲ್ಪಟ್ಟಿದ್ದಾಳೆ.

ಸರಸೋತಿಗೆ ತನ್ನ ಕುಂಕುಮ ಅಳಿಸಿ ವಿಧವೆಯಾದರೂ ದುಃಖ ಪಟ್ಟವಳಲ್ಲ. ಆದರೆ ಪಾರೋತಿಯ ಹಿತ ಚಿಂತನೆಯೇ ಅವಳಿಗೆ ಮುಖ್ಯ ಸಂಗತಿಯಾಗುತ್ತದೆ. ತನ್ನ ಬಂಜೆತನಕ್ಕೆ ಮರುಗುವ ಪಾರೋತಿಯನ್ನು ಸಮಾಧಾನ ಮಾಡುತ್ತಾ, ಸರಸೋತಿ ಹೇಳುವ ಮಾತೆಂದರೆ. 'ಈಗ ನಿನ್ನ ಕರುಳೇ ಹೆರಬೇಕೆಂದೇನು. ಹೋಗಲಿ. ದತ್ತು ಮಾಡಿಕೊಂಡರೆ ಏನು ತಪ್ಪು' ಎಂಬ ಸಲಹೆಯನ್ನು ಸೂಚಿಸುತ್ತಾಳೆ. ರಾಮ ಐತಾಳರಿಗೆ ಎರಡನೇ ಸಂಬಂಧವೇರ್ಪಟ್ಟಾಗಲಂತೂ ಪಾರೋತಿಯ ಅಂತರಂಗದ ದುಃಖದ ಮಡುವಿಗೆ ಸ್ಪಂದನೆಯಾಗಿ ಸರಸೋತಿ ಧೈರ್ಯ ತುಂಬುತ್ತಾಳೆ. 'ಈ ಭೂಮಾತೆಯ ನೆರಳಲ್ಲಿ ನಡೆವಾಡುವ ಇತರ ವ್ಯಕ್ತಿಗಳಿಗೆ ಸ್ವಂತ ಅಸ್ತಿತ್ವವೇ ಇಲ್ಲವೇನೋ ಎಂಬಂತೆ ಕೆಲವೊಮ್ಮೆ ಭಾಸವಾಗುವುದುಂಟು.

ಆದರಂತೆ ಪಾರೋತಿಯ ಸಾವು, ಐತಾಳರ ಮರಣ. ಮರಣ, ಸರಸೋತಿಯ ಜೀವನವನ್ನು ಕುಗ್ಗಿಸಿ ಬಿಟ್ಟರೂ ಲಚ್ಚನ ಮಗ ರಾಮನ ಕಡಲಿನ ಮೋಹ-ಅವಳಿಗೆ ತೃಪ್ತಿಯನ್ನು ಕೊಟ್ಟಿದೆ, ಐತಾಳರ ವಂಶದ ಉದ್ಧಾರಕನೆಂದು ಅವರ ಮಗನಾದ ಲಚ್ಚನಲ್ಲಿ ಇರಿಸಿದ ನಂಬಿಕೆ, ಅವನ ಪಲಾಯನದಿಂದ ಛಿದ್ರ ವಿಚಿದ್ರವಾಗಿದೆ, ಲಚ್ಚನ ಪತ್ನಿ ನಾಗವೇಣಿಯ ಧೈರ್ಯ, ರಾಮನಲ್ಲಿ ಮೂಡಿದ ಮಣ್ಣಿನ ಸೆಳೆತದಿಂದಾಗಿ ಸರಸೋತಿ ಎದೆಗಟ್ಟಿ ಮಾಡಿಕೊಳ್ಳುತ್ತಾಳೆ. ಜೀವನ ರಥ ಸಾಗುತ್ತದೆ. ಅವನ ವ್ಯಕ್ತಿತ್ವವನ್ನು ಮೇಲ್ಮಟ್ಟಕ್ಕೇರಿಸುತ್ತದೆ. ಸರಸೋತಿ ಅನಕ್ಷರಸ್ಥ ಹೆಣ್ಣಾದರೂ ಕೆಚ್ಚು, ಸ್ವಾಭಿಮಾನ, ಕರುಣೆ ಮತ್ತು ಮಾರ್ದವತೆ ಮುಂತಾದ ಮಾನವೀಯ ಗುಣಗಳನ್ನು ಮೈಗೂಡಿಸಿಕೊಂಡ ಸ್ತ್ರೀತ್ವದ ಮಾದರಿಯಾಗಿದ್ದಾಳೆ. ಕೆಲವೊಮ್ಮೆ ಮೌನ ಸಂವೇದನೆಗಳೇ ಸಮಾಜದ ವ್ಯಕ್ತಿತ್ವದ ನಿಯಂತ್ರಕಗಳಾಗಿರುತ್ತವೆ. ಹಾಗಾಗಿ ಸರಸೋತಿ ಇವೆಲ್ಲದರ ಸಾಕಾರಮೂರ್ತಿಯೆಂದರೆ, ಉತ್ಪ್ರೇಕ್ಷೆಯಾಗಲಾರದು. ಪಾರೋತಿಸರ ಸೋತಿಯರು ಬಹುಪಾಲು ಜೀವನದಲ್ಲಿ ಜೊತೆಯಾಗಿ ಬದುಕಿದರೂ ಸ್ವಭಾವದಲ್ಲಿ ಇಬ್ಬರೂ ವಿಭಿನ್ನ ವ್ಯಕ್ತಿತ್ವಗಳು, ಸರಸೋತಿ ಬಾಲ ವಿಧವೆಯಾದರೂ ಆಕೆ ಸ್ವಾಭಿಮಾನವನ್ನು ಮೈಗೂಡಿಸಿಕೊಂಡಿದ್ದಾಳೆ. ವಿಧವೆಯೆಂದರೆ ಸಮಾಜದಲ್ಲಿ ಅಮಂಗಳಕರವಾದ, ಕೀಳೆಂಬ ಮೌಢ್ಯ ಅಭಿಪ್ರಾಯವಿದೆ. ಆದರೆ ಅವರೂ ಸಹ ಮಾನವೀಯ ಮೌಲ್ಯವುಳ್ಳವರು ಎಂಬ ಅಂಶವನ್ನು ಕಾರಂತರು ಈ ಪಾತ್ರಗಳ ಮೂಲಕ ನಿರೂಪಿಸುತ್ತಾರೆ. ಐತಾಳರು ಅನ್ಯಾಯ ಮಾಡಿದರೆ ಸಹಿಸುವ ಸ್ವಭಾವ ಈಕೆಯದಲ್ಲ. ಬದಲಿಗೆ ದಿಟ್ಟತನದಿಂದ ಎದುರಿಸುವ ತಾನು ಧೈರ್ಯವುಳ್ಳವಳಾಗಿದ್ದಾಳೆ.

ಸರಸೋತಿಯು ವಿಧವೆಯಾದ್ದರಿಂದ ಒಪ್ಪತ್ತು ಊಟ ಮಾಡಿದರೂ ಪಾರೋತಿ ಮಾತ್ರ ರಾತ್ರಿ ಊಟ ಬಿಟ್ಟರೆ ಆಕೆ ಸಂಕಟ ಪಡುತ್ತಾಳೆ. ರಾಮ ಐತಾಳರಿಗೆ ಪಾರೋತಿಗಿಂತ ಸರಸೋತಿ ಬಗ್ಗೆ ಹೃದಯದಲ್ಲಿ ಅಳುಕಿನ ಭಾವನೆ ತುಂಬಿರುತ್ತಿತ್ತು.

ಸರಸೋತಿಯ ಪರಿಶ್ರಮ, ದಿಟ್ಟತನಗಳನ್ನು ಐತಾಳರು ಮನಸ್ಸಿನಲ್ಲಿಯೇ ಗೌರವಿಸುತ್ತಾರೆ. ಹೊಲಗದ್ದೆಗಳಲ್ಲಿ ಗಂಡಸರು-ಹೆಂಗಸರಿಗೆ ಸಮಾನವಾಗಿ ಸರಸೋತಿ ದುಡಿದರೂ ಐತಾಳರು 'ಈ ಸಾರಿ ಫಸಲು ಬಹಳ ಕಡಿಮೆ' ಎಂದು ಸುಳ್ಳು ಹೇಳುವ ವಿಚಾರ ನಾವು ಗಮನಿಸಿದಾಗ ಪುರುಷ ಸಮಾಜ ಯಾವ ರೀತಿ ಹೆಣ್ಣಿನ ಶೋಷಣೆ ಮಾಡುತ್ತದೆ ಎಂದು ತಿಳಿಯಬಹುದು.

ಆದರೆ ಅವರ ಸುಳ್ಳನ್ನು ಸರಸೋತಿ ನಂಬಿ ಕೂರುವ ಹೆಣ್ಣಲ್ಲ ಅವಳು ಅಣ್ಣನಿಲ್ಲದಿದ್ದಾಗ ಎಷ್ಟು ಕಳಸೆ ಭತ್ತ ಇದೆಯೆಂದು ಪರೀಕ್ಷಿಸಿ ನೋಡುತ್ತಾಳೆ. ಆದರೆ ಪಾರೋತಿಯಾದರೆ ಗಂಡ ಹೇಳಿದ್ದನ್ನೆಲ್ಲಾ ಕೇಳಿಕೊಂಡಿರುವಾಕೆ. ಹಾಗೆಯೇ ಅಣ್ಣನ ಮೋಸವನ್ನು ಕಂಡು ಹಿಡಿಯುವ

ಚಾತುರ್ಯವುಳ್ಳವಳು. ಐತಾಳರು ಮನೆಯ ಯಜಮಾನನಾದರೂ ತಂಗಿಯ ಉತ್ತಮ ವಿಚಾರಗಳಿಗೆ ಬೆಲೆಕೊಟ್ಟು ತಲೆತಗ್ಗಿಸಬೇಕಾಗಿತ್ತು. ಆದ್ದರಿಂದಲೇ ಸರಸೋತಿ ತನ್ನ ವಿಶಿಷ್ಟಗುಣ, ಸಾಮರ್ಥ್ಯಗಳಿಂದ ಉನ್ನತ ಸ್ತ್ರೀ ಪ್ರತಿಮೆಯಾಗಿದ್ದಾಳೆ ಎಂದರೆ ತಪ್ಪಾಗಲಾರದು.

ರಾಮೈತಾಳರು ಎರಡನೇ ಮದುವೆಯ ವಿಚಾರವನ್ನು ಮನೆಯಲ್ಲಿ ತಿಳಿಸದೆ ಚಪ್ಪರ, ಅಂಗಳ ಸಾರಿಸಲು ಅಜ್ಞಾಪಿಸಿದಾಗಲೂ ಅಣ್ಣ ಯಾವುದೋ ಮುಖ್ಯ ವಿಚಾರವನ್ನು ತಮ್ಮಿಂದ, ಮುಚ್ಚಿಡುತ್ತಾನೆಂದು ಸರಸೋತಿ ಕೋಪ ಮಾಡಿಕೊಳ್ಳುತ್ತಾಳೆ.

ವೈಧವ್ಯ ಎಂದೂ ಆಕೆಯ ಆತ್ಮಾಭಿಮಾನವನ್ನು ಕಡಿಮೆ ಮಾಡಲಿಲ್ಲ. ಕೊನೆಗೆ ಐತಾಳರೇ ಆಕೆಗೆ ಮಣಿಯ ಬೇಕಾಯಿತು. ಬದುಕಿನ ಬಗ್ಗೆ ಇರುವ, ಉತ್ಸಾಹ, ಹುಮ್ಮಸ್ಸು ಅಮಿತವಾದ ಆಕಾಂಕ್ಷೆಯನ್ನು ಹೊತ್ತ ಸರಸೋತಿ. 'ಶರಣರನ್ನು ಮರಣದಲ್ಲಿ ನೋಡು' ಎಂಬಂತೆ ಮರಣದ ಸನ್ನಿವೇಶದಲ್ಲೂ ಇವಳ ಭವ್ಯ ವ್ಯಕ್ತಿತ್ವ ತನ್ನದೇ ಆದ ರೀತಿಯಲ್ಲಿ ಶೋಭಿಸುತ್ತದೆ. ಸಮುದ್ರಕ್ಕೆ ಹೋಗಿ ಸ್ನಾನ ಮಾಡಿ, ಅಲ್ಲಿದ್ದ ವೈದಿಕನಿಗೆ ದಾನ ಕೊಟ್ಟು ಬಂದು, ಮಲಗಿಕೊಂಡು, ಅಣ್ಣನ ಮೊಮ್ಮಗನ ಕೈಯಲ್ಲಿ ತೀರ್ಥ ಕುಡಿದು, ಮೆಲುನಗೆ ನಕ್ಕು ಪ್ರಾಣಬಿಟ್ಟ ಈಕೆ ಇಚ್ಛಾಮರಣಿ ಎಂದರೆ ಸುಳ್ಳಾಗಲಾರದು. ಇಡೀ ಕಾದಂಬರಿಯಲ್ಲಿ ಇನ್ನು ಯಾವ ಪಾತ್ರದಲ್ಲೂ ಕಾಣದ ಕೆಚ್ಚು, ಸ್ವಾಭಿಮಾನ, ಕರುಣೆ, ಮಾರ್ದವತೆ, ವಿವೇಕ ತುಂಬಿರುವ ಪಾತ್ರದ ಬಗ್ಗೆ ನಮಗೆ ಗೌರವ ತುಂಬಿ ಬರುತ್ತದೆ.

ಪಾರೋತಿಯೊಂದಿಗೆ ಬದುಕು ಸಾಗಿಸುವ ತಮ್ಮ ನಡತೆಯ ಬಗ್ಗೆ ಆತ್ಮಹತ್ಯೆಗೊಂಡು ಅರ್ದ್ರಗೊಳ್ಳುವ ಸತ್ಯಭಾಮೆ-ಐತಾಳರು ಆಧುನಿಕ ಆಶಯಗಳ ದ್ವಂದ್ವಗಳಿಗೆ ಬಲಿಯಾಗಿ, ಹಣ ಪೋಲು ಮಾಡುತ್ತಾರೆ. ಲಚ್ಚ ಐತಾಳರ ಆಶಯಗಳಿಗೆ ವಿರುದ್ಧ ದಿಕ್ಕಿನಲ್ಲಿ ಸಾಗುತ್ತಾನೆ. ಆಗ ಯಾವುದು ಜೀವನ ಪ್ರೀತಿಯ ಆಶಯವಾಗಿತ್ತೋ ಅಂತಹ ಮೌಲ್ಯಗಳ ಅಧಃಪತನದ ಪ್ರಕ್ರಿಯೆ ಪ್ರಾರಂಭವಾಗುತ್ತದೆ.

- ತಾರುಣ್ಯವು ಬರುತ್ತದೆ, ಹೋಗುತ್ತದೆ. ಆದರೆ ಸ್ಥಿರವಾಗಿ. ನಿಲ್ಲುವುದು ಮಾತ್ರ ವೃದ್ಧಾಪ್ಯವೊಂದೇ' ಎಂಬ ಮಾತಿನ ನಿಲುವನ್ನು ನಾವು ಗಮನಿಸಬಹುದು.
- ಕಾರಂತರ ಕಾದಂಬರಿಗಳಲ್ಲಿ ಬದುಕು, ಸಾವನ್ನು ಒಂದೇ ಮಟ್ಟದ ನಿರ್ಲಿಪ್ತತೆಯಲ್ಲಿ ಇರಿಸುವಷ್ಟು ಮಾಗಿದ ಮುದುಕಿಯರು ಆಗಾಗ ಬರುತ್ತಿರುತ್ತಾರೆ

ಎನ್ನುವ ಜಿ.ಎಚ್.ನಾಯಕರು ಇಂಥ ವೃದ್ಧೆಯರನ್ನು 'ಬೆಲ್ಲದ ಅಚ್ಚಿಗೆ' ಹೋಲಿಸುತ್ತಾರೆ.

- ಇಂಥ ಮುದುಕಿಯರಲ್ಲಿ 'ಮರಳಿ ಮಣ್ಣಿಗೆ' ಕಾದಂಬರಿಯ ಸರಸೋತಿ, ಪಾರೋತಿ ಪ್ರಮುಖರು.

- ಈ ಕಾದಂಬರಿಯಲ್ಲಿ ಸರಸೋತಿ, ಪಾರೋತಿಗಿಂತಲೂ ಗಟ್ಟಿಕುಳ. ಎದೆಗೆಡುವ ಪ್ರಸಂಗ ಬಂದಾಗಲೆಲ್ಲ ಕರಿಮೋಡವನ್ನು ಚದರಿಸುವ ಪಡುವಣ ಗಾಳಿಯಂತೆ, ಅವಳು ಮಾತಿನ ಚವರಿ ಬೀಸಿ, ಸನ್ನಿವೇಶಕ್ಕೆ ತಂಪೆರೆಯುತ್ತಾಳೆ. ಆಕೆ ಮಹಾಸ್ವಾಭಿಮಾನಿ. ಹಾಗೆಂದು ತಪ್ಪಿಗಾಗಿ ಪಶ್ಚಾತ್ತಾಪ ಪಡುವವರನ್ನು ಕಂಡರೆ ಅವಳ ಸಿಟ್ಟೆಲ್ಲ ಮಾಯವಾಗಿ ವಾತಾವರಣ ಹದಗೊಳ್ಳುತ್ತದೆ.

ರಾಮ ಐತಾಳರು ತನ್ನ ಮರು ಮದುವೆ ವಿಚಾರವನ್ನು ಮನೆಯಲ್ಲಿ ಹೇಳದಿದ್ದರಿಂದ ಸಿಟ್ಟುಗೊಂಡು, ಮಾವನ ಮನೆಗೆ ಹೊರಟು ಹೋದ ತಂಗಿ ಸರಸೋತಿಯನ್ನು ಅವರು ಒಲಿಸಿ ತಿರುಗಿ ಕರೆದುಕೊಂಡು ಬಂದಾಗಲೇ ಅವಳಿಗೆ ಸಮಾಧಾನ. ಈ ಅಣ್ಣನ ಒಣ ಹೆಮ್ಮೆಯು ಒಂದು ಬಾರಿಯಾದರೂ ತನ್ನಿಂದ ಮುರಿಯಿತಲ್ಲ' ಎಂದು ಸಾಮಾನ್ಯವಾಗಿ ವೈಧವ್ಯ ತಂದೊಡ್ಡುವ ವಿಕ್ಷಿಪ್ತತೆಯಿಂದ ದೂರವೇ ಉಳಿಯುವ ಮುದುಕಿಯದು ನಿಡುಗಾಲದ ಬವಣೆಗೆ ಅಂಜಿದವರಲ್ಲ, ಮೇಲಾಗಿ ಬದುಕನ್ನು ಪ್ರಿಯವಾಗಿಸಿ ಕೊಳ್ಳುತ್ತಾರೆ. ಇಂಥದೊಂದು ಅಪರೂಪದ ವ್ಯಕ್ತಿ ಸರಸೋತಿ.

ಸರಸೋತಿಯ ಮುನಿಸು, ಅವಳ ಅಸ್ತಿತ್ವವನ್ನು ಅಲುಗಾಡಿಸಿದ್ದರ ಫಲ. ತನ್ನ ಅದೃಷ್ಟವನ್ನು ತಾನೇ ಹಳಿದುಕೊಳ್ಳುವ ಪಾರೋತಿಗೆ ಅವಳೊಂದು ಅಮೃತ ಸಿಂಚನ, ಬೆಳಗಿನ ಜಾವದಲ್ಲಿ ಮಗು ಲಚ್ಚನ ಹಠಕ್ಕೆ ಸೋತು ಹುರುಳಿ ಗದ್ದೆಯೆಡೆಗೆ ಪಾರೋತಿ ಅವನನ್ನು ಕರೆದುಕೊಂಡು ಹೋದುದರಿಂದಲೇ ಆತನಿಗೆ ಜ್ವರ ಕಾಣಿಸಿಕೊಂಡಿತೆಂದು ಸತ್ಯಭಾಮೆ ಸಿಡುಕಿದಳು, ಯಾರ ಮಗು ಹೋದರೆ ಯಾರಿಗೇನು ?

ಎಲ್ಲೋ ಒಂದು ಕಡೆ ಪಾರೋತಿಯ ಬಗೆಗಿನ ಈ ಅಪಾರ ವಿಶ್ವಾಸ, ಕದಡಿ ಹೋಗುವ ಸಂದರ್ಭಗಳಲ್ಲಿ ಸರಸೋತಿ ವಹಿಸುವ ಧೈರ್ಯ ಅದ್ಭುತವಾದದ್ದು. ಮೇಲೆ ತನ್ನ ಮೊದ ಮೊದಲಿಗೆ ಸವತಿ ಮತ್ಸರ ಪಾರೋತಿಯನ್ನು ಕಾಡುತ್ತಿತ್ತು. ಮುಂದೆ ಲಚ್ಚ ಹುಟ್ಟಿದ ಮೇಲೆ ತನ್ನ ಶ್ರಾದ್ಧಕ್ಕೊಂದು ಗತಿಯಾಯಿತು ಎಂಬ ಸಂತಸ ಅವಳದಾಯಿತು. ಸಾವಿನ ಕೊನೆಯುಗಳಿಗೆಯಲ್ಲಿ

'ಅವನು ನನ್ನ ತಲೆಯನ್ನು ತೊಡೆಯ ಮೇಲೆ ಇರಿಸಿಕೊಂಡಾರೆ?' ಎಂಬ ಅವಳ ಸೋಲುದನಿ ಪಾರೋತಿಯ ಜರ್ಜರಿತ ಮನಸ್ಸನ್ನು ಐತಾಳರು ಅವಳ ಬಗೆಗೆ ವಹಿಸಿದ ತೀರ ನಿರ್ಲಕ್ಷ್ಯವನ್ನು ಸೂಚಿಸುತ್ತದೆ. ದುಡಿದು ಹಣ್ಣಾಗಿ ವಯಸ್ಸಿಗೆ ಮೊದಲೇ ವೃದ್ಧಾಪ್ಯ ಆವರಿಸಿಕೊಂಡ ತನ್ನ ಬದುಕಿನ ಬಗೆಗೆ ಅವಳೆಂದೂ ಆಳವಾಗಿ ಚಿಂತಿಸಿದ್ದಿಲ್ಲ. ಈಗಂತೂ ಐತಾಳರ ತೊಡೆಯ ಮೇಲೆ ತಲೆಯನ್ನಿರಿಸಿಕೊಂಡು ನಿಷ್ಕಲ್ಮಷ ಎಳೆ ನಗುವಿನಿಂದ 'ನನಗೇನು ಬೇಕಿನ್ನು' ಎನ್ನುತ್ತ ಪಾರೋತಿ ಕೊನೆಯುಸಿರು ಎಳೆದಾಗ 'ಎಣೆ ತಪ್ಪಿದ ದುಃಖದಿಂದ ಅಳು ತಂದು ಕೊಂಡವಳು ಸರಸೋತಿ.

ಸರಸೋತಿಯ ಬದುಕೊಂದು ದೀರ್ಘ ಯಾತ್ರೆ, ಸಾಲದ ಹಣದಿಂದ ಲಚ್ಚನು ಮದ್ರಾಸಿನಲ್ಲಿ ಮೋಜು ಮಾಡುತ್ತಿದ್ದರೆ ಆತನ ಪತ್ನಿ ನಾಗವೇಣಿಯನ್ನು ಸಂತೈಸುವ ಕೆಲಸವನ್ನು ಅವಳೇ ಮಾಡಬೇಕು. ಅವಳಿಗೂ ಅದೃಷ್ಟದ ಆಟವೇ ದೊಡ್ಡದು ಎನಿಸುತ್ತದೆ. ತನ್ನನ್ನು ಕಂಡು ಉಳಿದವರು ತಮ್ಮ ದುಃಖವನ್ನು ಶಮನ ಮಾಡಿಕೊಳ್ಳಬೇಕು, ಎಂದು ಅವಳು ಆಡಿದ ಮಾತು ಇತರರ ದುಃಖತಪ್ತ ಮನಸ್ಸಿನ ಬೇಗೆಯನ್ನು ಸ್ವಲ್ಪವಾದರೂ ಶಮನಗೊಳಿಸುತ್ತದೆ. ಬೆನ್ನಲ್ಲೇ ಎರಗಿದ ಐತಾಳರ ಸಾವಿನ ದೃಶ್ಯ. ಇದನ್ನು ಕಂಡ ಸರಸೋತಿಗೆ 'ಕಣ್ಣೀರ ಒರತೆ ಬತ್ತಿತ್ತು' ಮಾತು ಮೊದಲೇ ಆರಿತ್ತು, ತಂದೆಯ ಮರಣಾನಂತರ ಆ ಊರನ್ನೇ ಬಿಟ್ಟ ಲಚ್ಚನ ಸುಳಿವಿಲ್ಲ. ನಾಗವೇಣಿ ತಂದೆಯ ಮನೆಗೆ ಹೋಗಬೇಕೇ ಬೇಡವೇ, ಎಂಬ ಡೋಲಾಯಮಾನ ಸ್ಥಿತಿಯಲ್ಲಿದ್ದಾಳೆ. ಸತ್ಯಭಾಮೆಯೂ ಅಣ್ಣನ ಮನೆಗೆ ಹೋಗಲೇ ಎಂದು ಯೋಚಿಸುತ್ತಾಳೆ. ಕೊನೆಗೂ ನಾಗವೇಣಿಯ ನಿರ್ಧಾರ, ಮೂವರು ಅನಾಥೆಯರನ್ನು ಕೋಡಿಯ ಮನೆಯಲ್ಲೆ ಉಳಿಸಿ ಬಿಡುತ್ತದೆ, ಗಂಡನಿದ್ದೂ ನಾಗವೇಣಿ ಅನುಭವಿಸುವ ಸಂಕಟದಿಂದ ನೊಂದು ಸರಸೋತಿ ನುಡಿಯುತ್ತಾಳೆ.

'ನಮ್ಮಂಥವರಿಗೆ ಗಂಡನಿಲ್ಲದೆ ವೈಧವ್ಯವಾದರೆ ಅವಳಿಗೆ ಇದ್ದೂ ವೈಧವ್ಯ ಆಯಿತು'.

ನಾಗವೇಣಿ ಹೆತ್ತ ಮಗು ಪುಟ್ಟ ಅದೇ ತಿಂಗಳಲ್ಲಿ ಯಕೃತ್ತಿನ ಬೇನೆಗೆ ತುತ್ತಾಗಿ ಸಾವು ಕಂಡಾಗ 'ಅವನದೇ ಏನೋ ಒಂದು ಲೆಕ್ಕ ಇರಬೇಕು' ಎನ್ನುವ ಸರಸೋತಿ ದೈವದ ಮೇಲೆ ಭಾರ ಹಾಕಿ ಅಳಲನ್ನು ಕುಗ್ಗಿಸುತ್ತಾಳೆ.

ದೀರ್ಘ ಆಯುಷ್ಯದಲ್ಲಿ ಪಡೆದ ದುಗುಡವನ್ನು ತಗ್ಗಿಸಲೆಂದೇ ಬಾಳಿದ ಈ ಮುದಿ ಜೀವಕ್ಕೆ ಸಾವಿನಲ್ಲಿ ಬಂದೊದಗಿದ ತೃಪ್ತಿಯೆಂದರೆ ಮೊಮ್ಮಗ ರಾಮನ ಕಡಲ ಮೋಹ, ಮಣ್ಣಿನ ಬಗೆಗಿರುವ ಅವನ ಪ್ರೀತಿಯಲ್ಲಿ.

ಮೂರನೇ ತಲೆಮಾರು ಕಂಡುಕೊಂಡ ಜಾಗೃತಾವಸ್ಥೆಯ ಮುಂಗಿರಣಗಳ ಹೊಳಹನ್ನು ಅವಳು ಅನುಭವಿಸುತ್ತಾಳೆ. ಇಲ್ಲಿವರೆಗೆ ಜಿಗಿ ಹಿಡಿದಿದ್ದ ತನ್ನ ಆಯುಷ್ಯವನ್ನು ತಾನೇ ಸಡಿಲಿಸಿ ಕೊಂಡವಳಂತೆ ಅವಳು ತೃಪ್ತಿಯ ಸಾವನ್ನು ಕಾಣುತ್ತಾಳೆ. 'ಅವರು ಇಚ್ಚಾ ಮರಣಿಗಳು, ಕರೆದ ಗಳಿಗೆಗೆ ಅವರಿಗೆ ಸಾವು ಬಂದಿತು' ಎಂದು ಸತ್ಯಭಾಮ ನುಡಿದ ಮಾತಿನ ಅರ್ಥವಾದರೂ ಇದೇ.

ಎಷ್ಟೇ ಧೈರ್ಯವಿದ್ದರೂ, ಹತಾಸೆಯ ಸ್ಥಿತಿ 'ಹಣೆಯ ಬರಹಕ್ಕೆ' ಅದೃಷ್ಟಕ್ಕೆ ಮಾರು ಹೋಗುವ ತರುಣಿಯರಿಗಿಂತ, ಹಾಗೆ ಬಳಲಿದವರ ಸ್ಥಿತಿಯನ್ನು ಉಪಶಮನದ ಒಂದು ಮಾಧ್ಯಮವಾಗಿ ಕಂಡು ಹುಡುಕುವ ವೃದ್ಧೆಯರು ಗಾಳಿಪಟದ ಸೂತ್ರ ನಿಯಂತ್ರಣಕ್ಕೆ ಬದ್ಧರಾಗುವ ಜಾಣ್ಮೆ ಉಳ್ಳವರಂತೆ ಚಾಲಕ ಶಕ್ತಿಯನ್ನು ಪಡೆದವರು.

ಉಪಾಧ್ಯಾಯರ ಹೆಂಡತಿಯೊಬ್ಬಳೇ ಇದಕ್ಕೆ ಅಪವಾದವೆಂಬಂತೆ ಇರುವವಳು. ಈಕೆ ಕಣ್ಣು ಕಾಣದ ಜಬ್ಬಿ, ಹಳ್ಳಿ ಹಳಸಿದೆ' ಆದ್ದರಿಂದಲೇ ಜನ ಪಟ್ಟಣ ಸೇರುತ್ತಾರೆ. ಎಂದು ಸಾರಾಸಗಟಾಗಿ ನುಡಿಯುತ್ತಾಳೆ.

'ಈಗ ಕೋಟದ ಊರು ಎಂದರೆ, ಹೆಣ್ಣು ಮಕ್ಕಳ ಊರು', ನನ್ನಂತಹ ಕಣ್ಣು ಕಾಣದ ಜಬ್ಬುಗಳ, ಇನ್ನು ಬೇರೆ ದಾರಿ ಇಲ್ಲದವರು ಇರುವ ತಾವು, ಆದರೆ ಕೋಡಿಯ ಮುದುಕಿಯರಲ್ಲಿ ಇಂಥ ನಿರಾಕರಣೆಯ ಭಾವ ಇಲ್ಲ. ಹಳ್ಳಿಯನ್ನು ಕಡೆಗಣಿಸಿ ಪಟ್ಟಣದ ಆಮಿಷಕ್ಕೆ ಬಲಿಯಾದ ಲಚ್ಚನ ಜೀವನ ಈ ಕಾರಣದಿಂದಲೇ ಅವರಿಗೆ ನಿಕೃಷ್ಟವೆನಿಸುತ್ತದೆ.

ಎಂಥೆಂತ ಭೀಷಣವಾದ ತಿರುವಿನಲ್ಲಿಯೂ ತಮ್ಮ ಸ್ವಭಾವಗಳನ್ನು ಬದಲಿಸದೆ ಬದಲಾಗುತ್ತಿರುವ ಭವಿಷ್ಯಕ್ಕೆ ಎದೆಗೊಡುವ ಈ ಮುದುಕಿಯರ 'ಅರಿವಿಗಿಂತ–'ಇರ'ವನ್ನು ಕಾರಂತರು ಹೆಚ್ಚಾಗಿ ಕೀರ್ತಿಸುತ್ತಾರೆ ಎಂಬ ಜಿ.ಎಚ್.ನಾಯಕ್ ಹೇಳಿಕೆ ಅರ್ಥವತ್ತಾದುದು, ಇಳಿ ವಯಸ್ಸಿನ ಇವರೆಲ್ಲರೂ 'ತಾವು ನಂಬಿ ಬಂದ ಸಂಪ್ರದಾಯದತ್ತವಾದ ಧಾರ್ಮಿಕ ತಿಳುವಳಿಕೆಯ ಸಹಾಯದಿಂದ ತಮ್ಮ ಪರಿಸ್ಥಿತಿಯನ್ನು ಅರ್ಥ ಮಾಡಿಕೊಂಡು ಆ ಪರಿಸ್ಥಿತಿ ಒದಗಿಸಬಹುದಾದ ಮಿತ ಅವಕಾಶ ಮತ್ತು ಸೌಲಭ್ಯಗಳನ್ನು ಸದುಪಯೋಗ ಪಡಿಸಿಕೊಂಡು ಜನ್ಮ ಸಾರ್ಥಕ ಮಾಡಿಕೊಳ್ಳುವ ಹಂಬಲವುಳ್ಳವರು. ಸಾಧ್ಯವಾದಷ್ಟು ಬೇರೆಯವರ ಋಣದಲ್ಲಿ ಬೀಳದೆ ಉಳಿದವರ ಒಳಿತಿಗಾಗಿಯೇ ತಮ್ಮ ಬಾಳನ್ನು ತೇಯುವವರು, ಪರರ ಹಂಗಿನಲ್ಲಿರುವುದು. ಅನಿವಾರ್ಯವೆಂಬಂತಾದಾಗಲೂ ಸಂಬಂಧಪಟ್ಟವರಿಗೆ ಭಾರ ಎನಿಸದಂತೆ ಬಾಳಿ ಆ ಮನೆಗೆ ಬೆಳಕಾಗುವವರು. ಸಾರ್ಥಕ ಬದುಕಿನತ್ತ ಹೆಜ್ಜೆ ಹಾಕುತ್ತ ಹೊರಟ ವ್ಯಕ್ತಿಗೆ ಅನೇಕ ದ್ವಂದ್ವಗಳನ್ನು

ಎದುರಿಸುವುದು ಅನಿವಾರ್ಯವಾಗುತ್ತದೆ. ಬದುಕಿನ ಬಗೆಗಿರುವ ಅಚಲ ಪ್ರೀತಿ ಹಾಗೂ ಸ್ಥಾಪಿತ ಗುಣಗಳನ್ನು ಪ್ರಶ್ನಿಸುವ ಮನೋಬಲವಿರುವವರು ಇಲ್ಲಿ ಗೆಲ್ಲುತ್ತಾರೆ. ಸೋಲುವವರು ಏಕೆ ಸೋಲುತ್ತಾರೆಂಬ ಜಿಜ್ಞಾಸೆಯನ್ನು ಕಾರಂತರು ನಡೆಸುವುದಿಲ್ಲ. ಮೊದಲೇ ನಿರ್ಧರಿಸಿಕೊಂಡ ಮೌಲ್ಯ ಚಿಂತನೆ ಏಕಮುಖವಾಗಿ ಹರಿಯುವುದರಿಂದಲೂ ಬದುಕಿನಲ್ಲಿ ಅಪೂರ್ವತೆ ಎದುರಾಗುತ್ತದೆ. ಕಾರಂತರು ಚಿತ್ರಿಸಿದ ಮುದುಕಿಯರು ಬಾಳಿನಲ್ಲಿ ಪೂರ್ಣತೆಯನ್ನು ಅರಸುವವರು. ಸ್ವೀಕೃತ ಮನೋಭಾವದಲ್ಲಿಯ ಅವರ ಕದಲದ ನಿರ್ಧಾರಗಳು ಪ್ರಾಮಾಣಿಕತೆಯ ಸಂಕೇತಗಳು ಎನಿಸಿ ಬಾಳನ್ನು ಸುಂದರಗೊಳಿಸುವಲ್ಲಿ ನೆರವಾಗುತ್ತವೆ. ತಾನು ಸ್ವತಂತ್ರವಾಗಿ ಬಾಳಿ ಉಳಿದವರಿಗೂ ಸ್ವತಂತ್ರವಾಗಿರ ಕೊಡುವುದೇ ಅಂದವಾದ ಬಾಳಿನ ಬಗೆ.

ಇಲ್ಲಿ ನೇತ್ಯಾತ್ಮಕ ವಿಷಯಗಳು ಅಂದಗೊಳ್ಳುವುದುಂಟು. ಒಳಿತು-ಕೆಡುಕು ಇವೆರೆಡರ ಸಮ್ಮಿಶ್ರವೆನಿಸುವ ಬದುಕನ್ನು ಆದಷ್ಟು ಸಂಯಮಶೀಲತೆಯಿಂದ ಸಹನೀಯಗೊಳಿಸುವ ಎಲ್ಲ ಪ್ರಯತ್ನಗಳನ್ನು ಕಾರಂತರು ಗೌರವಿಸುತ್ತಾರೆ. 'ನಿಸರ್ಗದ ಮಡಿಲಲ್ಲಿ ಸಮಾಜದ ಒಡಲಲ್ಲಿ ಹುಟ್ಟುವ ಎರಡು ಕಾಲುಗಳ, ಎರಡು ಕೈಗಳ ಪ್ರಾಣಿ ದಾನವನಾಗಲೂಬಹುದು, ದೇವರೆಯಾಗಲೂ ಬಹುದು. ದಿನಕಳೆದಂತೆ ಘನೀಭವಿಸುವ ಒಳಿತು ಕೆಡುಕುಗಳ ಆ ಮಿಶ್ರಲೋಹದಿಂದ ದೈವತ್ವವನ್ನೇ ರೂಪಿಸುವ ರಹಸ್ಯ ತಜ್ಞ ಕಾರಂತರು.

ಮುದುಕಿಯರದು ದೀರ್ಘಕಾಲದ ಅನುಭವವಾದ್ದರಿಂದ ತಮ್ಮ ತಮ್ಮ ನಂಬಿಕೆಗಳಿಗನುಗುಣವಾಗಿ ಬದುಕಿದ ಇಂಥ ವ್ಯಕ್ತಿಗಳು ತನಗೆ ಪ್ರಿಯರು', ಎಂಬ ಕಾರಂತರ ಅಭಿಪ್ರಾಯವನ್ನು ವನಮಾಲಾ ವಿಶ್ವನಾಥ್- 'ವೃದ್ಧೆಯರನ್ನು ಆರಿಸಿಕೊಳ್ಳಲು ಇದೊಂದೇ ಕಾರಣವಾದರೆ ವಯಸ್ಸಾದ ಅನುಭವಸ್ಥ ವೃದ್ಧರನ್ನೇ ಆರಿಸಿ ಕೊಳ್ಳಬಹುದಿತ್ತು.

ಇಂಥ ಸಂದೇಹ ಹಲವರಲ್ಲಿ ಹುಟ್ಟುವ ಸಾಧ್ಯತೆಗಳೂ ಇಲ್ಲದಿಲ್ಲ. ಆದರೆ ಭಾರತೀಯ ಸಮಾಜದಲ್ಲಿ ಗಂಡು ಹೊರಬಯಲಿನ ಅಧಿಕಾರಿಯಾಗಿ ಬಿಡುವುದರಿಂದ, ಆತ ಒಳ ಹೊರಗಿನ ವಿಚಾರಗಳಿಗೆ ಅಧಿಕೃತ ವ್ಯಕ್ತಿ ಎನಿಸಲಾರ ಮತ್ತು ಜೀವನವನ್ನು ಸೂಕ್ಷ್ಮವಾಗಿ ಅವಲೋಕಿಸುವ ಅನಿವಾರ್ಯತೆಗೆ ಆತ ತೊಡಗಿಸಿಕೊಳ್ಳುವುದೂ ತೀರ ವಿರಳ. ಸಂವೇದನೆಯ ಪ್ರತೀಕಾತ್ಮತೆಯಲ್ಲಿಯೂ ಮುದುಕಿಯರು ಕಾರಂತರಿಗೆ ಹೆಚ್ಚು ಪ್ರಿಯರೆಂಬುದನ್ನು ಆಯಾಯಾ ವ್ಯಕ್ತಿ ಚಿತ್ರಣಗಳಲ್ಲಿ ಅವುಗಳನ್ನು ಅರ್ಥೈಸಿಕೊಳ್ಳುವಲ್ಲಿ ನಾವು ಕಂಡುಕೊಳ್ಳಬಹುದಾಗಿದೆ.

## ಕೊನೆ ಟಿಪ್ಪಣಿ

೧. ಜಿ.ಎಸ್. ಆಮೂರ : ಸಮಕಾಲೀನ ಕಥ ಕಾದಂಬರಿ ಹೊಸ ಪ್ರಯೋಗಗಳು- ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು : ೧೯೯೯, ಪುಟ – ೧೬

೨. ಅದೇ ಪುಟ – ೧೬

೩. ಜಿ.ಎಚ್.ನಾಯಕ್ : ಕಾರಂತರ ಕಾದಂಬರಿಗಳಲ್ಲಿ ಜೀವನ, ಶ್ರದ್ಧೆ ಮತ್ತು ಶೋಧನೆ. (ಕಾರಂತರ ಮಂಥನ) ಶ್ರೀ ರಾಘವೇಂದ್ರ ಪ್ರಕಾಶನ.

ಅಂಬಾರ ಕೊಡ್ಲ : ೨೦೦೦, ಪು. ೧೩೧

೪. ಶಂಭಾಜೋಶಿಯವರ ಸೌಂದರ್ಯ ವಿಚಾರ, ಮಾನವ ಧರ್ಮ ಪ್ರತಿಷ್ಠಾನ, ಬೆಳಗಾವಿ : ೧೯೯೨, ಪುಟ – ೧೨

೫. ಗಾಯತ್ರಿ ನಾವಡ : ಮಹಿಳಾ ಸಂಕಥನ ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು : ೨೦೦೩, ಪುಟ – ೨೧೯

೬. ಡಾ. ರೇವಯ್ಯ ಒಡೆಯರ್, ಡಾ. ಶಿವರಾಮ ಕಾರಂತರ ಕಾದಂಬರಿಗಳಲ್ಲಿ ಮಾನವೀಕರಣದ ನೆಲೆಗಳು, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು : ೨೦೦೮, ಪುಟ – ೧೨೧.

೭. ಪ್ರೊ.ಎಸ್. ಅನಂತರನಾರಾಯಣ, ಕಾರಂತರ ಕಾದಂಬರಿಗಳಲ್ಲಿ ನಿಸರ್ಗ, ಕರ್ನಾಟಕ ಸಂಘ, ಪುತ್ತೂರು : ೧೯೯೧, ಪುಟ – ೧ ರಿಂದ ೨

# ಅಧ್ಯಾಯ – ೦೩

## ಕಾರಂತರ ಮರಳಿ ಮಣ್ಣಿಗೆ ಹಾಗೂ ಇತರ ಕಾದಂಬರಿಯ ಸ್ತ್ರೀಯರು

'ತಾತ್ಕಾಲಿಕ ಮೋಹವು ಚಿರಕಾಲದ ತನಕ ಉಳಿಯಬೇಕಾದರೆ ಗಂಡು-ಹೆಣ್ಣುಗಳ ಮನೋವೃತ್ತಿ, ಆಸಕ್ತಿಯಲ್ಲಿ, ಉದ್ದೇಶದಲ್ಲಿ, ಸ್ನೇಹಗಳಲ್ಲಿ ಹೊಂದಿಕೆಬೇಕು. ಅವರ ಶಾರೀರಿಕ, ಮಾನವಿಕ ಬಯಕೆಗಳೂ ಮೇಳಗೊಳ್ಳಬೇಕು. ಅದಿಲ್ಲದೆ ಹೋದರೆ ವಿವಾಹ ಎಂಬ ಮಾತಿಗೆ ಅರ್ಥವಿಲ್ಲ.

– ಡಾ. ಶಿವರಾಮಕಾರಂತ

'ಮರಳಿ ಮಣ್ಣಿಗೆ'ಯಲ್ಲಿ ಗಂಡು-ಹೆಣ್ಣಿನ ಸಂಬಂಧ ಚಿತ್ರಿತವಾಗಿದೆ. ಸರಸೋತಿಯಂತೆ ಪಾರೋತಿ, ಸತ್ಯಭಾಮೆ, ನಾಗವೇಣಿಯರು ಬೇರೆ ಬೇರೆ ರೀತಿಗಳಲ್ಲಿ ಲೈಂಗಿಕ ಸವಾಲುಗಳನ್ನು ಎದುರಿಸಿದವರೇ ಆ ಸವಾಲುಗಳನ್ನು ಪಲಾಯನಗೈಯದೇ ಬಂಡಾಯ ಮಾಡದೆ ಅಲ್ಲದ ವಿಶಿಷ್ಟ ರೀತಿಯಲ್ಲಿ ನಿವಾರಿಸಿಕೊಳ್ಳುತ್ತಾರೆ. ಎರಡು ಅಲೆಗಳ ನಡುವೆ ಎಲ್ಲೋ ಇರಬಹುದಾದ ಸತ್ಯವನ್ನು ಅರಸುವ ಕಾರಂತರ ಬರವಣಿಗೆಯ ಒಂದು ಅತ್ಯುತ್ತಮ ಮಾದರಿಯಾಗಿ 'ಮರಳಿ ಮಣ್ಣಿಗೆ; ಮುಖ್ಯವಾಗುತ್ತದೆ.

'ಮರಳಿ ಮಣ್ಣಿಗೆ'ಯಲ್ಲಿ ಲಚ್ಚ ಆಧುನಿಕ ಶಿಕ್ಷಣ ಪಡೆದರೂ ಕೌಟುಂಬಿಕ ಹೊಣೆಗಾರಿಕೆಯಿಂದ ಪಲಾಯನ ಮಾಡುವುದರ ಮೂಲಕ ಅವನತಿಯ ಪ್ರತೀಕವಾಗುತ್ತಾನೆ. ಆಧುನಿಕತೆಯ ಪ್ರವೇಶ ಮತ್ತು ಆದರ್ಶದ ಕಲ್ಪನೆಗಳಿಗೆ ಸಂಪೂರ್ಣ ತಿಲಾಂಜಲಿಯನ್ನು ನೀಡುವ ಪ್ರಕ್ರಿಯೆ ಜೀವವಿಕಾಸದ ಹಿನ್ನಡೆಯನ್ನು ಸೂಚಿಸುತ್ತದೆ. ನಾಗವೇಣಿಯೂ ಕೂಡ ಶಿಕ್ಷಣವಂತೆ ವಿಚಾರಶೀಲಳೂ ಆಗಿದ್ದಾಳೆ. ಆದರೆ ತನ್ನ ಕುಟುಂಬದಲ್ಲಿ ಗುರುತರವಾದ ಜವಾಬ್ದಾರಿಯನ್ನು ಸೂಕ್ಷ್ಮ ಕೌಶಲದಿಂದ, ಬಡತನ ಮತ್ತು ಕಠಿಣ ಬದುಕನ್ನು ಸಮರ್ಥವಾಗಿ ನಿರ್ವಹಿಸುತ್ತಾಳೆ. ಆದ್ದರಿಂದಲೇ ಕಾರಂತರ ಕಾದಂಬರಿಗಳ ಸ್ತ್ರೀ ಪಾತ್ರಗಳು ಬದುಕಿನ ಬಗ್ಗೆ ಶ್ರದ್ಧೆ, ಕಾಳಜಿಗಳನ್ನು ಇಟ್ಟುಕೊಂಡು ವರ್ತಿಸುತ್ತವೆ. ಹಾಗೆಯೇ ವಾಸ್ತವವಾದಿ ದೃಷ್ಟಿ ಕುಟುಂಬವನ್ನು ಭಾವನಾತ್ಮಕ ಸಂಬಂಧಗಳಿಗಾಗಿ ತುಡಿಯುವ. ಬದುಕಿನ ಜೀವನದ ನಿಲುವುಗಳಿಂದ ತಮ್ಮ ಅಸ್ತಿತ್ವವನ್ನು ಕಂಡುಕೊಳ್ಳುವ ಸ್ತ್ರೀಪರ ಕಾಳಜಿಗಳಿಗೆ ಪ್ರತೀಕಗಳಾಗುತ್ತಾರೆ.

ಅದರಂತೆ ನಾಗವೇಣಿಯ ಬದುಕು ಮಾತ್ರ ಸದಾ ಕಠಿಣ ಮತ್ತು ಸಂಘರ್ಷದ ಕಣವಾಗಿದೆ. ಗಂಡನಾದ ಲಚ್ಚ ಸಂಸಾರ ತ್ಯಜಿಸಿ ಹೋಗಿದ್ದರಿಂದ ಅವಳ ಮನಸ್ಸು ಇಬ್ಬಗೆಯಾಗಿ

ಓಡುತ್ತಿದೆ. ಮನೆಯ ಹಿರಿಯರ ಮೇಲಣ ಮಮತೆ ಗೌರವಗಳು ಇರುವಷ್ಟು ಬಲವಾಗಿಯೇ ತನ್ನನ್ನು ದುರ್ಗತಿಗೆ ವಂಚನೆಯಿಂದ ತಂದಿರಿಸಿದ ಪತಿಯ ಮೇಲಿನ ಸಿಟ್ಟಿದೆ, ತಮ್ಮ ನರಗಳನ್ನು ತಿಕ್ಕಿ ತೇದಿಯಾದರೂ ಬಾಳ್ವೆ ಮಾಡಿ ಗಂಡನು ಕೈಬಿಟ್ಟರೂ ತಾವು ಸತ್ತಿಲ್ಲ ಎಂದು ತೋರಿಸಬೇಕೆಂಬ ಹಠ ಕುದಿಯುತ್ತಿತ್ತು' ಎಂಬುದು ಆಕೆಯ ಬದುಕಿನ ನೊಂದ ನೋವಿನ ದನಿಗೆ ಇಂಬು ಕೊಡುವ: ಅವಳ ಅಂತರಾತ್ಮದಲ್ಲಿ ಭಾವನೆಗಳ ತೀವ್ರತೆಯಾಗಿದೆ. ಪುರುಷ ಕೌಟುಂಬಿಕ ಅಧಿಕಾರದ ಪ್ರಶ್ನೆ ಬಂದಾಗ ಎಲ್ಲವೂ ತನ್ನದೆಂದು ನಂಬುತ್ತಾನೆ. ಅನಂತ ಬದುಕಿನೊಂದಿಗೆ ಸೆಣಸಾಟಬೇಕಾದಾಗ ಮಾತ್ರ ಪಲಾಯನವಾದಿಯಾಗುತ್ತಾನೆಂಬುದಕ್ಕೆ ಲಜ್ಜ ನೈಜ ಉದಾಹರಣೆಯಾಗುತ್ತಾನೆ. ಆದರೆ ನಾಗವೇಣಿಯ ದಿಟ್ಟವಾದ ನಿಲುವು, ಬದುಕಬೇಕೆಂಬ ಛಲ. ಆಕೆಯ ಹೋರಾಟದ ಮೇಲ್ಮೈಯನ್ನು ಅನಾವರಣಗೊಳಿಸುತ್ತಾರೆ ಕಾರಂತರು. ಎಂದೂ ಕಷ್ಟಪಡದ ನಾಗವೇಣಿ ಗಂಡನ ಪಲಾಯನದಿಂದ ಕುಟುಂಬದ ಹೊಣೆ ಹೊರಗಿನ ವ್ಯವಹಾರವನ್ನು ಸುಸೂತ್ರವಾಗಿ ಮಾಡುತ್ತಾಳೆ. ನಾಗವೇಣಿಯ 'ಒನಕೆ ಹಿಡಿಯದ ಕೈ' ಭತ್ತ ಕುಟ್ಟಿ ಅಕ್ಕಿ ಮಾಡುವುದು. ಅವಲಕ್ಕಿ ಕುಟ್ಟುವುದು ಇತ್ಯಾದಿ ಕೆಲಸಗಳಿಂದ ಜಡ್ಡು ಗಟ್ಟಿದ ರಟ್ಟೆಯ ನೋವು ನಾಳೆಯ ಬದುಕಿನ ಹೊರಳು ಹಾದಿಯ ಪಯಣ ಇಂತಹ ಸಂದಿಗ್ಧತೆಯಲ್ಲಿ ನಿರಂತರ ಹೋರಾಡುತ್ತಾಳೆ ಅವಳ ಹೋರಾಟವೆಂದರೆ ಹಳೆ-ಹೊಸತರ ಘರ್ಷಣೆಯೂ ಹೌದು. ನಾಗವೇಣಿ ವಿದ್ಯಾವಂತೆ. ಬುದ್ಧಿಶಾಲಿ, ಜೊತೆಗೆ ಧೈರ್ಯಶಾಲಿ, ರೋಗಗ್ರಸ್ತ ಗಂಡನೊಡನೆ ಬದುಕನ್ನು ನಡೆಸವಾಗಿನ ತೊಡಕಿನಲ್ಲಿ ಏಕಾಂಗಿಯಾಗಿ ಎದುರಿಸುವ ಎದೆಗಾರಿಕೆ ಬದಲಾಗುತ್ತಿರುವ ಮೌಲ್ಯಗಳೊಡನೆ ಸಂಘರ್ಷ ನಡೆಸುತ್ತವೆ. ಬಿರುಕೊಡೆದ ಬದುಕಿನ ತಳಹದಿಯನ್ನು ಬಲಪಡಿಸುವ ಛಲಗಾರಿಕೆ. ನಾಗವೇಣಿಯಲ್ಲಿ, ಸ್ಥಿತ ಪ್ರಜ್ಞತೆಯನ್ನು ಉಂಟು ಮಾಡಿದೆ.

ಮೂರನೆಯ ತಲೆಮಾರಿನ ರಾಮನ ಕಡಲ ಪ್ರೇಮಚಿತ್ರ, ಸಂಗೀತ-ಇವು ಗೆದ್ದಲು ಹಿಡಿದು ಲಡ್ಡಾದ ಐತಾಳರ ಮನೆಯ ಛಾವಣಿಗೆ ಮತ್ತೆ ನಿಲ್ಲಿಸಲಾಗಿದ್ದ ಬೋದಿಗೆ ಕಂಬಗಳು. ಜೀವನ ಕಾವ್ಯಕ್ಕೆ ಬಣ್ಣ ತುಂಬಿದ ಸುಂದರ ಪ್ರತಿಮೆಗಳು ಶಿವರಾಮಕಾರಂತರ ಕಾದಂಬರಿಗಳ ಮುಖಾಂತರ ಗಮನಿಸಬಹುದಾದ ಅಂಶವೆಂದರೆ ಮಹಿಳೆಯರು ಹೋರಾಟ ಮತ್ತು ಹೊಣೆಗಾರಿಕೆಯನ್ನು ಅತ್ಯಂತ ಸಹಜ ಸಹಭಾಗಿತ್ವದಲ್ಲಿ ನಿರ್ವಹಿಸುತ್ತಾರೆ.

ಮರಳಿ ಮಣ್ಣಿಗೆಯ ಸ್ತ್ರೀ ಪಾತ್ರಗಳು ಮುಖ್ಯವಾಗಿ ಪ್ರಕೃತಿ ಮಾನವನ ಬದುಕನ್ನು ಅಲ್ಲಿನ ಸ್ತ್ರೀಯರ ಮನಸ್ಸೇ ಒಂದು ಕಡಲಾಗಿ ಕಂಡು ಬರುತ್ತದೆ. ಕಡಲಿನ ಏರಿಳಿತಗಳಂತೆ ಮನುಷ್ಯನ

ಬದುಕಿನ ಏರಿಳಿತಗಳು, ಕಷ್ಟ-ಸುಖಗಳು. ಶ್ರೀಮಂತಿಕೆ-ಬಡತನ ಇವುಗಳನ್ನು ಸಮನ್ವಯ ದೃಷ್ಟಿಯಲ್ಲಿ ಕಾರಂತರು ಕಾದಂಬರಿಗಳ ಮೂಲಕ ಕಾಣಲು ಪ್ರಯತ್ನಿಸುತ್ತಾರೆ. ಲಚ್ಚನ ಪಲಾಯನ ವಾದಿತನ ಮತ್ತು ನಾಗವೇಣಿಯ ಜವಾಬ್ದಾರಿಯುತ ಸ್ಥಾನ ಇವುಗಳ ದ್ವಂದ್ವ ಹೊಂದಾಣಿಕೆಯನ್ನು ಕಾರಂತರು ನಿರೂಪಿಸುತ್ತಾರೆ. ನಾಗವೇಣಿ-ಲಚ್ಚನ ದಾಂಪತ್ಯವು ವಿಷಮತೆಯತ್ತ ಹೋಗುತ್ತದೆಯೇ ಹೊರತು. ಒಂದುಗೂಡುವುದಿಲ್ಲ ಕೊನೆಗೂ ಅದು ಕಾಳಿ ಸೂರರ ದಾಂಪತ್ಯವಾಗಿ ತುಂಬಿಕೊಳ್ಳುವುದಿಲ್ಲ. ಯಾವ ಶಿಕ್ಷಣ ಸಂಸ್ಕಾರಗಳನ್ನು ಪಡೆಯದೆ ಇರುವ ಬದುಕನ್ನು ಸಾರ್ಥಕಪಡಿಸಿಕೊಳ್ಳುತ್ತಾರೆ. ಆದರೆ ವೈಚಾರಿಕವಾಗಿ ಯೋಚಿಸುವ, ಶಿಕ್ಷಣ ಪಡೆದ ಲಚ್ಚ-ನಾಗವೇಣಿಯರ ದಾಂಪತ್ಯ ಜೀವನ ಲೈಂಗಿಕ ಅಧಿಕಾರದ ಪರಾಕಾಷ್ಠೆಯನ್ನು ತಲುಪುತ್ತದೆ ಎಂಬುವಷ್ಟರ ಮಟ್ಟಿಗೆ ದೈಹಿಕ ಹಿಂಸೆ, ಲೈಂಗಿಕ ಜೀವನದ ಭಯ ಅವಳನ್ನು ಕಾಡಿ ಮಾನಸಿಕ ಬೇನೆಯನ್ನು ತರುತ್ತದೆ.

'ಮರಳಿ ಮಣ್ಣಿಗೆ'ಯ ಲಚ್ಚನ ದಾರಿಯಲ್ಲಿಯೇ ಸಾಗುವ 'ನಿರ್ಭಾಗ್ಯ ಜನ್ಮ'ದ ಆನಂದ, ಈತನೂ ಕೂಡ ತನ್ನ ಹೆಂಡತಿಯ ಮೇಲೆ ಅಧಿಕಾರ ಸ್ಥಾಪಿಸುತ್ತಾನೆ. ಗೆಳೆಯರ ಸಹವಾಸದಿಂದ ವೇಶ್ಯೆಯ ಸಂಗ ಸಂಪಾದಿಸುತ್ತಾನೆ, ತನ್ನ ಹೆಂಡತಿ ಭಾಗ್ಯಲಕ್ಷ್ಮಿಯನ್ನು ಹತೋಟಿಯಲ್ಲಿಟ್ಟುಕೊಂಡು ಆಕೆಯನ್ನು ಕೊನೆಗೆ ಕಡೆಗಣಿಸುತ್ತಾನೆ. ವೇಶ್ಯೆ ಮನೋರಮೆಯ ಮೋಹದ ಬಲೆಗೆ ಬಿದ್ದ ಆನಂದ ಮನೆಯ ಆಸ್ತಿ. ವಸ್ತು, ಒಡವೆಗಳನ್ನು ಮನೋರಮೆಗೊಪ್ಪಿಸಿ ತಂದೆ ಆಸ್ತಿಯನ್ನೂ ಕರಗಿಸುತ್ತಾನೆ. ಇಲ್ಲಿ ಆನಂದನ ಸ್ತ್ರೀ ತಾತ್ಸಾರದ ಮನೋಧರ್ಮ ಮತ್ತು ಪಲಾಯನ ವಾದಿತ್ವದಿಂದ ಪ್ರೇರಿತನಾಗಿ ವರ್ತಿಸುತ್ತಾನೆ. ಶಿವರಾಮ ಕಾರಂತರು ತಮ್ಮ ಕಾದಂಬರಿಗಳಲ್ಲಿ ಬಹಳ ಮುಖ್ಯವಾಗಿ ಶೋಧಿಸುವ ಅಂಶಗಳು ಸ್ತ್ರೀಯರ ಅನೇಕ ಸಮಸ್ಯೆಗಳು, ಸವಾಲುಗಳು ಮತ್ತು ಇತರರಿಂದ ಒದಗುವ ನಿರಂತರ ಹಿಂಸೆ ಶೋಷಣೆಗಳನ್ನು ಹತ್ತಿರದಿಂದ ಚಿತ್ರಿಸುತ್ತಾ ಹೋಗುತ್ತಾರೆ.

ಕಾರಂತರ ಪ್ರಕಾರ ಗಂಡಸರಲ್ಲಿ ಸಹಜ ಕ್ರಿಯೆಯಾಗಿ ಬಹುತೇಕ ಕಾದಂಬರಿಗಳಲ್ಲಿ ಗಮನಿಸಬಹುದು. 'ಮರಳಿ ಮಣ್ಣಿಗೆ' ಯ ರಾಮೈತಾಳರೆ ಇದಕ್ಕೆ ಹೊರತಾಗಿಲ್ಲ. ರಾಮ ಐತಾಳರು ಕುಟುಂಬ ನಿರ್ವಹಣೆಯಲ್ಲಿ ತೆಗೆದುಕೊಳ್ಳುವ ನಿರ್ಧಾರಾತ್ಮಕ ಅಂಶಗಳು ಯಾಜಮಾನಿಕೆಯ ಸ್ವರೂಪ, ಕೌಟುಂಬಿಕ ಕೆಲಸ ಕಾರ್ಯಗಳು-ಇವು ಸಹಜವಾಗಿ ಬರದೆ ಯಾಜಮಾನ್ಯದ ಅಂಶವಾಗಿರುವುದನ್ನು ಕಾಣಬಹುದು. ಮುಖ್ಯವಾಗಿ ಲಚ್ಚನ ಚಂಚಲತೆ, ಅಸ್ಥಿರತೆಯ ಮನಸ್ಸು ಪಲಾಯನವಾದಿತನ ಇಡೀ ಕಾದಂಬರಿಯಲ್ಲಿ ನಾಗವೇಣಿ-ಲಚ್ಚನ ಜೀವನದಲ್ಲಿ ಮರೆಯಲಾಗದ ಘಟನೆಯಾಗುತ್ತದೆ. ಪಶ್ಚಿಮದ ಶಿಕ್ಷಣ ಪದ್ಧತಿಗೆ ಮಾರುಹೋದ

ಲಚ್ಚ ಅಂತಸ್ತು, ಹಣವನ್ನು ಮನಸ್ಸಿನ ಇಚ್ಛೆಯಂತೆ ವ್ಯಯ ಮಾಡಿ ವಿಷಯ ಲಂಪಟನಾಗುವುದು ವಿಲಾಸಿ ಜೀವನದ ಅತಿರೇಕದಿಂದ ವೇಶ್ಯೆಯರ ಸಂಗ ಮಾಡಿ ರೋಗ ಅಂಟಿಸಿಕೊಳ್ಳುತ್ತಾನೆ, ಇದು ಆತನ ಮನಸ್ಸಿನ ಸಂಯಮದ ಅನಿಯಂತ್ರಿತ ಜೀವನವಾಗಿದೆ. ಆ ಪರಿಸ್ಥಿತಿಯಲ್ಲಿ 'ಗಂಡನ ವರ್ತನೆಯಿಂದ ಹೆಂಡತಿ ನಾಗವೇಣಿ ನೊಂದಿದ್ದಾಳೆ. ತನ್ನ ಮಗುವಿನ ಮರಣದಿಂದ ವ್ಯಥೆಗೀಡಾದ ಅವಳ ಮನಸ್ಸು ದೀರ್ಘಕಾಲದ ಬಳಿಕ ತಿರುಗಿ ಬಂದ ಗಂಡನಿಂದಾಗಿ ಸಂತೋಷ ಪಡುವುದಿಲ್ಲ. ಆಕೆಯ ಮೌನವನ್ನು ಭೇದಿಸಲು ಆತ ಯತ್ನಿಸಿದನೆಂದರೆ ಅವಳು ಹೇಳುತ್ತಾಳೆ.' ನನ್ನ ಹತ್ತಿರ ಹೇಳಲೇನಿದೆಯೆಂದು ಮಾತನಾಡಿಸುವುದು ?

ತಾವು ಕಸವಾಗಿ ನಮ್ಮನ್ನೂ ತುಳಿದು ಹೋದವರು ನೀವು. ಈಗ ನಮ್ಮ ಮೇಲೆಯೇ ಏಕೆ ಮಾತಿನ ಭಾರ ಹೊರಿಸುತ್ತೀರಿ?' ಎಂಬ ನಾಗವೇಣಿಯ ಮಾತಿನಲ್ಲಿ ಕೋಪವಿದ್ದರೂ ಅದನ್ನು ತಡೆಯಬಲ್ಲ ಆತ್ಮಶಕ್ತಿ ಅವಳಲ್ಲಿದೆ. ಲಚ್ಚನ ವೇಶ್ಯಾಸಂಗ ವಿಷಯ ಮೇಲು ತಡೆಗಳು ಯಾರಿಗೂ ಹಾದರವಾಗಿ ಕಾಣುವುದಿಲ್ಲ.

ಆದ್ದರಿಂದಲೇ ಕಾರಂತರು ಪುರುಷ ಪಾತ್ರಗಳನ್ನು ಚಿತ್ರಿಸುವಾಗ ಸಾಮಾನ್ಯವಾಗಿ ವಿಷಯಲಂಪಟ ಪಾತ್ರಗಳನ್ನು ಪ್ರಜ್ಞಾಪೂರ್ವಕವಾಗಿಯೇ ಚಿತ್ರಿಸುತ್ತಾರೆ. ಕಾರಂತರು ಕಾದಂಬರಿಗಳನ್ನು ಬರೆಯುತ್ತಿದ್ದ ಕಾಲಘಟ್ಟ ರಾಷ್ಟ್ರೀಯತೆಯ ಪರಿಕಲ್ಪನೆಯು ಜಾಗೃತಗೊಳ್ಳುತ್ತಿದ್ದ ಸಂದರ್ಭವಾಗಿತ್ತು. ಇದು ವಸಾಹತೋತ್ತರ ಚಿಂತನೆಯ ಮುಂಚೆಯೇ ಪರ್ವಕಾಲದಲ್ಲಿ ಭಾರತೀಯ ಸಮುದಾಯ ಎದುರು ನೋಡುತ್ತಿರುವ ಸಂದರ್ಭವಾಗಿತ್ತು. 'ಅಧಿಕಾರ ರಾಜಕಾರಣ' ಮತ್ತು 'ಲಿಂಗ ರಾಜಕಾರಣ' ಗಳ ಸಾಂದರ್ಭಿಕ ಕಾಲಘಟ್ಟದಲ್ಲಿ ಕಾರಂತರ ಕಾದಂಬರಿಗಳ ಜಾಗತಿಕ ಪ್ರಜ್ಞೆ ಮತ್ತು ಸ್ತ್ರೀಸ್ವಾತಂತ್ರ್ಯದ ಭೂಮಿಕೆಯಲ್ಲಿ ಮೈದಳೆಯುತ್ತವೆ. ಕಾರಂತರಿಗಿರುವ ಪ್ರಮುಖ ಕಾಳಜಿಯೆಂದರೆ ಸ್ತ್ರೀಯರ ಬದುಕಿನ ಕಷ್ಟ-ಸುಖಗಳು, ಪಶ್ಚಿಮದ ವಿಚಾರಧಾರೆ ಮತ್ತು ಭಾರತೀಯ ವಿಚಾರಧಾರೆಗಳ ನಡುವಿನ ಸಂಘರ್ಷಗಳ ದ್ವಂದ್ವದ ಮರುಚಿಂತನೆಯನ್ನು ತಿಳಿಗೊಳಿಸುವುದಾಗಿತ್ತು.

ಪುರುಷ ಪ್ರಧಾನ ಸಮಾಜವು ಸಾಂಪ್ರದಾಯಿಕವಾಗಿ ಹೆಣ್ಣು ಎಂದರೆ ಇಂತಹದೇ ಮಾದರಿಯಲ್ಲಿರಬೇಕೆಂಬ ಅಸಹಜವಾದ 'ಮಾದರಿ'ಗಳನ್ನು ರೂಪಿಸಿಕೊಂಡಿದೆ. ಆದರೆ ಕಾರಂತರ ಕಾದಂಬರಿಗಳು ಹೆಣ್ಣಿನ ಗುಣ ಮತ್ತು ಗಂಡಿನ ಗುಣಗಳ ನಡುವೆ ಇರುವ ದ್ವಂದ್ವಾತ್ಮಕ ತಾತ್ವಿಕತೆಯನ್ನು ಅಪ್ರಸ್ತುತಗೊಳಿಸುತ್ತದೆ. ಹೆಣ್ಣು/ಗಂಡು ಎನ್ನುವ ಪ್ರಶ್ನೆ ಸ್ತ್ರೀ ಲೈಂಗಿಕತೆಯಿಂದಲೇ ಆರಂಭವಾಗುತ್ತದೆ. ಏಕೆಂದರೆ ಪುರುಷ ತನ್ನ ಲೈಂಗಿಕ ಸ್ವಾತಂತ್ರ್ಯವನ್ನು ಜಾಣತನದಿಂದ

ರೂಪಿಸಿಕೊಂಡಿದ್ದಾನೆ. ಸ್ತ್ರೀಗೆ ಮಾತ್ರ 'ನೈತಿಕತೆ' 'ಪಾವಿತ್ರ್ಯತೆ' ಹಾಗೂ 'ಪಾತಿವ್ರತ್ಯ'ದ ಪರಿಕಲ್ಪನೆಗಳನ್ನು ಹೇರುವ ಮೂಲಕ ಆಕೆಯನ್ನು ವೈಭವೀಕರಿಸಲಾಗಿದೆ.

ಕಾರಂತರ ಕಾದಂಬರಿಗಳನ್ನು ಶೋಧನೆಗೊಳಪಡಿಸಿದಾಗ ಕಂಡು ಬರುವ ಪ್ರಮುಖ ಅಂಗಗಳೆಂದರೆ 'ಬಹುಪಾಲು ಪುರುಷರು-ಅನೈತಿಕ ಸಂಬಂಧಗಳನ್ನಿಟ್ಟುಕೊಂಡು ತಮ್ಮ ಆರೋಗ್ಯವನ್ನು ಕೆಡಿಸಿಕೊಂಡು ರೋಗಿಷ್ಟರಾಗುತ್ತಾರೆ. ಆದರೆ ಸ್ತ್ರೀಯರ ಸ್ಥಿತಿ ಇನ್ನೊಂದು ಬಗೆಯಲ್ಲಿ ಕಂಡು ಬರುತ್ತದೆ. ಅಲ್ಲಿನ ಸ್ತ್ರೀಯರು ತಮ್ಮ ಗಂಡಂದಿರು ಹೊಣೆಗೇಡಿಯರಾಗಿ ವರ್ತಿಸಿದಾಗ ಅಥವಾ ಹೆಂಡತಿಯನ್ನು ತ್ಯಜಿಸಿ ಪಲಾಯನ ಮಾಡಿದಾಗ, ಪರಿತ್ಯಕ್ತೆಯಾದ ಹೆಣ್ಣು ಸಂಸಾರ ಮತ್ತು ಮಕ್ಕಳನ್ನು ಲಾಲನೆ-ಪಾಲನೆಯನ್ನು ಮಾಡುವುದರ ಮೂಲಕ ಇಡೀ ಕುಟುಂಬವನ್ನು ಸಮರ್ಥವಾಗಿ ನಿರ್ವಹಣೆ ಮಾಡುತ್ತಾರೆ. ಕೆಲವೊಂದು ಸ್ತ್ರೀಯರು ತಮ್ಮ ಕುಟುಂಬದಲ್ಲಿ ನಡೆಯುವ ಯಾಜಮಾನ್ಯದ ವಿರುದ್ಧ ಬಂಡಾಯವನ್ನು ಮಾಡುತ್ತಾರೆ. ಲೈಂಗಿಕ ಬಂಡಾಯ, ವೈಚಾರಿಕ ಬಂಡಾಯಗಳ ಮೂಲಕ ತಮ್ಮನ್ನು ತಾವು ಗುರುತಿಸಿಕೊಳ್ಳುತ್ತಾರೆ. ಕಾರಂತರ ಕಾದಂಬರಿಗಳ ಸ್ತ್ರೀಯರು ಪ್ರತಿಭಟಿಸುವುದು. ಪುರುಷರನ್ನೇ ಅಲ್ಲ: ಬದಲಾಗಿ ಎಲ್ಲಿ ಜೀವ ವಿರೋಧಿ ಚಟುವಟಿಕೆ ಕಂಡು ಬರುತ್ತದೆಯೋ ಅಂತಹ ವ್ಯವಸ್ಥೆಯನ್ನು, ವ್ಯಕ್ತಿಗಳನ್ನು ನಿರ್ದಾಕ್ಷಿಣ್ಯವಾಗಿ ವಿರೋಧಿಸುತ್ತಾರೆ.

ಕಾರಂತರು ಸ್ತ್ರೀಯರ ಪಾತ್ರಗಳನ್ನು ಕೇವಲ ಪಾತ್ರಗಳಿಗಾಗಿ ಸೃಷ್ಟಿಸದೇ ಅವರ ಮೂಲಕ ಸಾಮಾಜಿಕ ಕಳಕಳಿಯನ್ನು ನಿರೀಕ್ಷಿಸುತ್ತಾರೆ. ಪುರುಷ ಪ್ರಧಾನ ಸಮಾಜ ನಿರ್ಮಿಸಿದಂತಹ ಸಾಂಪ್ರದಾಯಿಕ ಮನೋಭಾವದ 'ಸ್ತ್ರೀತತ್ವ'ವವನ್ನು ಕಾರಂತರು ಚಿತ್ರಿಸುವುದಿಲ್ಲ. ಇಲ್ಲಿನ ಸ್ತ್ರೀಯರು ಸಾಂಪ್ರದಾಯಿಕ ಗುಣಗಳ ಸ್ತ್ರೀಯರಿಗಿಂತ ಭಿನ್ನರಾಗಿ ಕಾಣಿಸಿಕೊಳ್ಳುತ್ತಾರೆ. ಆ ಕಾರಣಗಳಿಗಾಗಿಯೇ ಇಲ್ಲಿನ ಸ್ತ್ರೀಯರು ಲೈಂಗಿಕ ಸ್ವಾತಂತ್ರ್ಯ, ಧಾರ್ಮಿಕ ಸ್ವಾತಂತ್ರ್ಯಗಳನ್ನು ಮೀರಿ ನಡೆಯುತ್ತಾರೆ. ಈ ಸಮಾಜದಲ್ಲಿ ಹೆಣ್ಣು 'ಪಾತಿವ್ರತ್ಯ' ಅಥವಾ ನೈತಿಕತೆಯನ್ನು ಮೀರಕೂಡದೆಂಬ ವಾದವನ್ನು ಕಾರಂತರು ಸುಳ್ಳಾಗಿಸುತ್ತಾರೆ. ಹಾಗೆಂದು ಅವರು ನೈತಿಕತೆ ಮೀರುವುದಿಲ್ಲ. ನೈತಿಕತೆ ಕೇವಲ ಸ್ತ್ರೀಯರಿಗಷ್ಟೇ ಅಲ್ಲ, ಪುರುಷರಿಗೂ ಅನ್ವಯಿಸುತ್ತದೆ. ಇದು ಕಾರಂತರ ನಿಲುವು.

ಕಾರಂತರ ಪ್ರಶ್ನೆ ಎಂದರೆ ವ್ಯಕ್ತಿ ಹೆಣ್ಣಿಗೆ ಸಾಂಪ್ರದಾಯಿಕವಾಗಿ ಮದುವೆಯಾಗುತ್ತಾನೆ. ಆದರೆ ದಾಂಪತ್ಯ ಜೀವನವನ್ನು ಸರಿಯಾಗಿ ಅರ್ಥಮಾಡಿಕೊಳ್ಳದೇ ಹೆಂಡತಿಯನ್ನು ಮಾನಸಿಕ ದೈಹಿಕ ಹಿಂಸೆಯಿಂದ ಶೋಷಣೆ ಮಾಡುತ್ತಾನೆ. ಅಂದರೆ ಹೆಣ್ಣಿನ ಕೊರಳಿಗೆ ತಾಳಿಕಟ್ಟಿದ ಮಾತ್ರಕ್ಕೆ ಸುಖ ದಾಂಪತ್ಯವಾಗದು. ಪಾವಿತ್ರ್ಯತೆಬಾರದು. ಬದಲಾಗಿ ಹೆಣ್ಣು-ಗಂಡುಗಳಿಬ್ಬರೂ ಪರಸ್ಪರ

ಹೊಂದಾಣಿಕೆಯಿಂದ ಜೀವನ ನಡೆಸಿದಾಗ ಮಾತ್ರ ಕೌಟುಂಬಿಕ ಪರಿಸರ ಉನ್ನತಮಟ್ಟಕ್ಕೇರಲು ಸಹಕಾರಿಯಾಗುತ್ತದೆ. ಆದರೆ ಹೇಳುವುದು ಒಂದಾದರೆ, ನಡೆದುಕೊಳ್ಳುವ ರೀತಿ ಮತ್ತೊಂದು ರೀತಿಯದಾಗಿರುತ್ತದೆ. ಪುರುಷ ನಿಷ್ಠ ಸಂಸ್ಕೃತಿಯು ಹೀಗೆ ಸಮಾಜದಲ್ಲಿ ಗಂಡು-ಹೆಣ್ಣುಗಳಿಬ್ಬರನ್ನೂ ಬೇರೆ ಬೇರೆ ದೃಷ್ಟಿಕೋನಗಳಿಂದ ನೋಡುತ್ತಾ ಬಂದಿದೆ. ಶಿವರಾಮ ಕಾರಂತರು ಈ ಬಗೆಯ ಅಸಮಾನ ವ್ಯಕ್ತಿ ಪ್ರಜ್ಞೆಯನ್ನು ಭಂಜಿಸುವುದರ ಮೂಲಕ ಹೊಸ ಆಲೋಚನಾ ಕ್ರಮಗಳಿಗೆ ಆದ್ಯತೆ ನೀಡುತ್ತಾರೆ. ಇಡೀ ಚರಿತ್ರೆಯನ್ನು ಅವಲೋಕನ ಮಾಡಿದರೆ, ನಿರಂತರವಾಗಿ ಸ್ತ್ರೀಯನ್ನು ಗಂಡಿಗಿಂತ ಭಿನ್ನವಾಗಿ, ನೋಡಲಾಗುತ್ತದೆ. ಆದ್ದರಿಂದ ಕಾರಂತರು ಈ ಸಾಂಪ್ರದಾಯಿಕ ಮಾದರಿಗಳನ್ನು ಪುಡಿಗೈಯುವ ಸಾಂಸ್ಕೃತಿಕ ವಾತಾವರಣವನ್ನು ನಿರ್ಮಿಸುತ್ತಾರೆ, ಎನ್ನಬಹುದಾಗಿದೆ.

‘ಪ್ರಸಿದ್ಧ ಪಾಶ್ಚಾತ್ಯ ತತ್ವಜ್ಞಾನಿ ಅರಿಸ್ಟಾಟಲ್ ವಿಶ್ವದ ವಿಕಾಸ ಕ್ರಮದಲ್ಲಿ ದ್ರವ್ಯ ರಹಿತರೂಪ, ನಕ್ಷತ್ರ ಪ್ರಪಂಚ, ಮಾನವ ಪ್ರಪಂಚ, ಸತ್ಯ ಹಾಗೂ ಪ್ರಾಣಿ ಪ್ರಪಂಚ ಸಜೀವ ಪ್ರಪಂಚ, ನಿರ್ಜೀವ ಪ್ರಪಂಚ, ರೂಪ ರಹಿತ ದ್ರವ್ಯ ಎಂಬ ವಿಭಾಗಗಳನ್ನು ಗುರುತಿಸಿದ್ದ. ಇಲ್ಲಿ ಸಜೀವ ಪ್ರಪಂಚ ಎಂಬ ಮಾತು ಮುಖ್ಯವಾಗುತ್ತದೆ. ಫಲವಂತಿಕೆ ಎಂಬುದು ಒಂದೊಂದು ಜೈವಿಕ ವರ್ಗದಲ್ಲಿ ಒಂದೊಂದು ಬಗೆಯಾಗಿವೆ. ಒಂದು ಜೀವ ಮತ್ತೊಂದು ಜೀವಕ್ಕೆ ಜನ್ಮ ನೀಡುವ ಶಕ್ತಿಯೇ ಫಲವಂತಿಕೆ ಸರಳೀಕರಿಸಿ ಹೇಳಬಹುದಾದರೆ, ಗರ್ಭಧಾರಣ ಶಕ್ತಿ. ಇದು ಪ್ರಾಣಿ, ಪಕ್ಷಿ, ಸಸ್ಯ, ಮಾನವ ಎಂಬ ಭೇದಭಾವವಿಲ್ಲದೆ ಎಲ್ಲ ಜೀವರಾಶಿಗಳಲ್ಲಿಯೂ ಗೋಚರಿಸುವ ಸಾಮಾನ್ಯ ಅಂಶ.

ಮಹಿಳೆಗೆ ನಿಸರ್ಗ ನೀಡಿದ ವಿಶಿಷ್ಟ ಕೊಡುಗೆಯೆಂದರೆ ಫಲವಂತಿಕೆ. ಆಕೆಗೆ ಸಮಾಜದಲ್ಲಿ ಸ್ಥಾನಮಾನವೇನಾದರೂ ದೊರೆತಿದ್ದರೆ, ಅದು ಈ ಕಾರಣದಿಂದಲೇ ಎಂಬುದು ವಿದಿತ.

ಫಲವಂತಿಕೆಯಿಂದಾಗಿ ಹೆಣ್ಣನ್ನು ನಿಸರ್ಗದೊಂದಿಗೆ ಹೋಲಿಸುವುದಿದೆ. ಹೆಣ್ಣಿನ ಗರ್ಭಧಾರಣ ಶಕ್ತಿಗೂ, ಭೂಮಿಯ ಸಸ್ಯಧಾರಣ ಶಕ್ತಿಗೂ ಸಂಬಂಧ ಕಲ್ಪಿಸುವುದು ಸಾಮಾನ್ಯವಾಗಿದೆ.

‘ಗದ್ದೆಗೆ ಹಸಿರು ಚಂದ ಹೆಂಗಸಿಗೆ ಬಸಿರು ಚಂದ’ ಎಂಬ ಗಾದೆ ಮಾತನ್ನು ನೆನಪಿಗೆ ತಂದುಕೊಳ್ಳಬಹುದು. ಫಲ ಬಿಡುವ ವೃಕ್ಷಕ್ಕೆ ಹೆಣ್ಣನ್ನು ಹೋಲಿಸುವುದು ಆಕೆಯ ಫಲವತಿಂಕೆಯ ಕುರುಹು.

ನಮ್ಮ ಭಾರತೀಯರಲ್ಲಿ ಮದುವೆಯ ಮುಖ್ಯ ಉದ್ದೇಶ ಲೈಂಗಿಕ ತೃಪ್ತಿಗಿಂತ ಮಿಗಿಲಾಗಿ ಸಂತಾನ ಮುಂದುವರಿಕೆಯಾಗಿದೆ. ವಂಶೋದ್ಧಾರಕ್ಕೆ ಬಹಳ ಪ್ರಾಮುಖ್ಯತೆ ಸಿಕ್ಕಿದ್ದರಿಂದ ಫಲವಂತಿಕೆಗೆ ವಿಶೇಷ ಮಹತ್ವ ನೀಡಲಾಯಿತು. ಜನಪದರ ದೈವಾರಾಧನೆಯಿಂದ ಹಿಡಿದು ಮದುವೆಯ ಸಾರ್ಥಕ್ಯ ಮಕ್ಕಳನ್ನು ಪಡೆಯುವುದರಲ್ಲಿದೆ ಎಂಬ ಧೋರಣೆ ಇದ್ದುದರಿಂದ 'ಉತ್ತಲ್ಲದೆ ಮಣ್ಣಲ್ಲ, ಹೆತ್ತಲ್ಲದ ತಾಯಲ್ಲ' 'ಹೆಣ್ಣು ಹೆತ್ತ ಮನೆಯ ದೀಪ' ಎಂಬ ನಾಣ್ನುಡಿಗಳು ಹುಟ್ಟಿಕೊಳ್ಳುವಂತಾಯಿತು. ಮಕ್ಕಳಿಲ್ಲದೆ ಮಹಿಳೆ ಸಮಾಜದ ಕ್ರೂರ ದೃಷ್ಟಿಗೆ ಬೀಳಬೇಕಾಯಿತು. ಮಕ್ಕಳಿಲ್ಲದ ಹೆಣ್ಣು ಸಮಾಜದಲ್ಲಿ 'ಬಂಜೆ, ಗೊಡ್ಡಿ' ಎಂಬ ಅಪಮಾನಗಳಿಂದ ಗುರುತಿಸಲ್ಪಡುತ್ತಿದ್ದಳು. ಅಂಥ ಹೆಣ್ಣು

ಕಂದನ ಕೊಡು ಶಿವನೆ ಬಂಧನ ಪಡಲಾರೆ

ಹಂಗೀನ ಬಾನ ಉಣಲಾರೆ ಮರ್ತ್ಯಾದಾಗ

ಬಂಜೆಂಬ ಶಬುದ ಹೊರಲಾರೆ

ಎಂದು ತನ್ನ ಅಳಲನ್ನು ತೋಡಿಕೊಂಡಿದ್ದಾಳೆ. ಫಲವಂತಿಕೆಯ ಕೊರತೆಯನ್ನು ಪುಣ್ಯ ಪಾಪಗಳ ಪರಿಕಲ್ಪನೆಯೊಂದಿಗೆ ಜೋಡಿಸಿರುವುದುಂಟು. ಆದರೆ ಭಾರತ ನಂಬಿಕೆಗಳ ನೆಲೆಗಟ್ಟಿನ ಮೇಲೆ ನಿಂತಿದೆ.

ಒಂದು ವರ್ಗದ ಮೇಲೆ ನಂಬಿಕೆಗಳನ್ನು ಒತ್ತಾಯ ಪೂರ್ವಕವಾಗಿ ಹೇರುತ್ತಿದೆ. ಈ ಹಿನ್ನೆಲೆಯಲ್ಲಿ ಎಲ್ಲಾ ಹೆಣ್ಣುಗಳು ದಾಂಪತ್ಯದ ಚೌಕಟ್ಟಿನಲ್ಲಿ ಬಾರದಿರುವುದು ಐತಿಹಾಸಿಕ ಸತ್ಯ. ಜೋಗತಿ, ಬಸವಿ, ಲೇಸಿ, ಮರುಳೆ, ಪಾತರದವರು, ವೇಶ್ಯೆ ಎಂಬ ಹಲವು ಹೆಸರಿನಲ್ಲಿ ಮೈ ಮಾರಿಕೊಂಡ, ಮಾರಿಕೊಳ್ಳುತ್ತಿರುವ ಹೆಣ್ಣಿನ ತಾಯ್ತನದ ಬಗ್ಗೆ ಯೋಚಿಸುವುದು ಇಲ್ಲಿ ಗಮನಾರ್ಹ.

ಧರ್ಮ ಕೇಂದ್ರಿತ ಲೈಂಗಿಕ ದಾಸಿಯರಲ್ಲಿ ಕಂಡು ಬರುವ ದೇವಾಲಯದ ಸೂಳೆಯರು, ದೇವರ ಸೂಳೆಯರು, ಮಾನವನ ಸೂಳೆಯರು ಎಂದಿರುವ ಈ ವರ್ಗದವರಿಗೆ ತಾಯ್ತನವೂ ವರವಾಗುವುದರ ಬದಲು ಒಂದು ರೀತಿಯ ಶಾಪವಾದದ್ದು ವಿಪರ್ಯಾಸದ ಸಂಗತಿಯಾಗಿದೆ. ಗರ್ಭಧರಿಸುವ ಮೂಲಕವೇ ನನ್ನ ಹೆಣ್ತನ ಸಾರ್ಥಕವಾಯಿತು ಎಂದು ಯಾವ ಭಾರತೀಯ ಹೆಣ್ಣು ಭಾವಿಸುತ್ತಾಳೋ, ಅದೇ ಭಾರತೀಯ ಹೆಣ್ಣು ಗರ್ಭಧಾರಣೆ ಶಾಪ ಎಂದು ಕೊಂಡಿರುವ ವರ್ಗವೂ ಇದೆ. ಇದನ್ನು ಕಾರಂತರ ಕಾದಂಬರಿಗಳಲ್ಲಿ ಗಮನಿಸಬಹುದು. ಶಿವರಾಮಕಾರಂತರ 'ಧರ್ಮರಾಯನ ಸಂಸಾರ'ದ ಚೆಂದು 'ಮೈಮನಗಳ ಸುಳಿಯಲ್ಲಿ'ನ ಮಂಜಳೆ 'ಅಳಿದಮೇಲೆ'

ಕಾದಂಬರಿಯ ಸರಸಿ ಇವರೆಲ್ಲರೂ ತಾಯ್ತನಕ್ಕೆ ಹಂಬಲಿಸಿ ಬೇರೆ ಬೇರೆ ಕಾರಣಗಳಿಂದ ವಂಚಿತರಾದವರು.

ಶಿವರಾಮಕಾರಂತರ 'ಧರ್ಮರಾಯನ ಸಂಸಾರ'ದ ಚೆಂದು, ಬಾರಕೂರಿನ ನಾರಾಯಣ ಹೆಬ್ಬಾರರ ವೇಶ್ಯೆ, ಹೆಬ್ಬಾರರ ಪತ್ನಿ ಮಹಾಲಕ್ಷ್ಮಿ. ಮಹಾಲಕ್ಷ್ಮಿಗೆ ಚೆಂದು ನನ್ನ ಪತಿಯ ವೇಶ್ಯೆ ಎಂದು ತಿಳಿದೂ ಇವರಿಬ್ಬರೂ ಅಕ್ಕತಂಗಿಯರಂತೆ ಇದ್ದವರು. ವೇಶ್ಯೆ ಚಂದುವಿಗೆ ತಾಯ್ತನಿವಿರದಿದ್ದರೂ, ಮಹಾಲಕ್ಷ್ಮಿಯ ಮಕ್ಕಳನ್ನು ತನ್ನ ಮಕ್ಕಳೆಂದೇ ತಿಳಿದು, ತಾಯ್ತನವಿಲ್ಲದ ಕೊರಗನ್ನು ನೀಗಿಸಿಕೊಂಡಿರುತ್ತಾಳೆ. ಮಹಾಲಕ್ಷ್ಮಿಯ ಮಕ್ಕಳ ಕಷ್ಟಕ್ಕೆ ಚೆಂದು ಸ್ವಂತ ತಾಯಿಯಂತೆಯೇ ಮರುಗಿದವಳು. ಹೆಬ್ಬಾರರ ಮಗಳಾದ ಸರಸ್ವತಿಯನ್ನು ಕಟುಕರ ಕುಟುಂಬ ಅರೆಬೈಲು ಶಂಕರಯ್ಯನ ಏಕಮಾತ್ರ ಪುತ್ರ ಮಹಾಬಲಯ್ಯನಿಗೆ ಕೊಡುವಾಗ ಚೆಂದು ವಿರೋಧ ವ್ಯಕ್ತಪಡಿಸುತ್ತಾಳೆ. ಆ ಮೂಲಕ ಚಂದು ಸರಸ್ವತಿಯ ನಿಜವಾದ ತಾಯಿಯಾಗಿ ನಿಲ್ಲುತ್ತಾಳೆ, ಚೆಂದುವಿಗೆ ಹಣದ ಅವಶ್ಯಕತೆಯಿದೆ, ಆದರೆ ಅತಿಯಾಸೆಯಿಲ್ಲ, ಕಾರಣ ಹೆಬ್ಬಾರರ ಕುಟುಂಬದ ಸಂತೋಷವನ್ನು ಬಯಸುವವರಲ್ಲಿ ಈಕೆಯೂ ಒಬ್ಬಳು. ಈ ಹಿನ್ನೆಲೆಯಲ್ಲಿ ಓದುಗರ ಮನ ಸೆಳೆಯುತ್ತಾಳೆ ಮತ್ತು ಜನ ಸಾಮಾನ್ಯರಲ್ಲಿ ವೇಶ್ಯೆಯರ ಮನಸ್ಥಿತಿಯ ಕುರಿತು ಇರುವ ಧೋರಣೆಯನ್ನು ಬದಲಾಯಿಸುತ್ತಾಳೆ. ಕಾರಂತರ ಬಹಳಷ್ಟು ಕಾದಂಬರಿಗಳಲ್ಲೇ ಇಂತಹ ಪಾತ್ರಗಳು ಮತ್ತೆ ಮತ್ತೆ ಕಾಣಸಿಗುತ್ತವೆ.

ಕಾರಂತರ 'ಧರ್ಮರಾಯನ ಸಂಸಾರ'ದ ಹೆಬ್ಬಾರರ ಮಗಳು ಸರಸ್ವತಿಯನ್ನು ಕಟುಕರ ಕುಟುಂಬದ ಅರೆಬೈಲು ಶಂಕರಯ್ಯನ ಮನೆಗೆ ಕೊಡುವಾಗ, ಚೆಂದುಗಿದ್ದ ಮನೋಧರ್ಮವನ್ನು ನಾವು ಭೈರಪ್ಪನವರ 'ಗೃಹಭಂಗ' ಕಾದಂಬರಿಯ ಸರಸಿಯ ಪಾತ್ರದಲ್ಲಿ ಕಾಣಬಹುದಾಗಿದೆ.

ಶಂಕರಾಚಾರ್ಯರ 'ಕುಪುತ್ರೋಜಾಯೇತ ಕ್ವಚಿದಪಿ ಕುಮಾತಾ ನ ಭವತಿ' ಎಂಬ ಮಾತನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಶಿವರಾಮ ಕಾರಂತರ 'ಮೈಮನಗಳ ಸುಳಿಯಲ್ಲಿ'ನ ಮಂಜುಳೆಯ ಪಾತ್ರ ವೇಶ್ಯೆಯದ್ದು. ಆದರೆ ಕಾದಂಬರಿ ಓದುತ್ತಾ ಹೋದಂತೆ ಆಕೆ ವೇಶ್ಯೆಯಲ್ಲವೇನೋ? ಎಂಬ ಭಾವನೆ ಬಂದು ಬಿಡುತ್ತದೆ. ಕಾರಣ ಆಕೆಯ ತಾತ್ವಿಕ ಚಿಂತನೆ ನಡವಳಿಕೆ ಯೋಚನಾಶಕ್ತಿ. ಮೈ ಮನಸುಗಳ ನಡುವೆ ಆಕೆ ನಿಂತು ಯೋಚಿಸುವ ಕ್ರಮ. ಪುರುಷರೊಂದಿಗೆ ಆಕೆಯ ವರ್ತನೆ ಇವೆಲ್ಲವೂ ಮಂಜುಳೆಯನ್ನು ಮತ್ತೆ ಮತ್ತೆ ನೆನಪಿಸುತ್ತಿವೆ. ಮಂಜುಳೆಯ ತಾಯಿಗೆ ತನ್ನ ಮಗಳನ್ನು ಒಬ್ಬ ಯೋಗ್ಯ ಗೃಹಸ್ಥನಿಗೆ ಒಪ್ಪಿಸುವ ಆಸೆ ಇದೆ. ಹಣವಿದ್ದರೂ ಗುಣವಿಲ್ಲದವರನ್ನು ಸೇರಬಾರದು ಎನ್ನುತ್ತದೆ ಅವಳ ಮನಸ್ಸು.

'ಪ್ರಾಯ ಎಂಬುದು ಕುರುಡು, ಅದು ಉಕ್ಕಿ ಕಾಡುವಾಗ ಗಂಡಿನ ಕುಲವೆಲ್ಲ ಚೆಂದವಾಗಿ ಕಾಣಿಸಿತು. ಆದರೆ ನಾಳೆಯ ಚಿಂತೆಯನ್ನು ಮರೆತು ವ್ಯವಹಾರ ಮಾಡಿದವರು ಮುಳುಗಬೇಕಾದಿತು' ಎಂದು ಮಗಳಿಗೆ ಎಚ್ಚರಿಕೆ ನೀಡುತ್ತಾಳೆ, ಆದರೇನು ? ಧೈರ್ಯ ನೀಡಿದ ತಾಯಿ, ಭರವಸೆಯ ಬೆಳಕನ್ನು ಮೂಡಿಸಿದ ಪಾಳ. ಇಬ್ಬರೂ ಮರಣ ಹೊಂದಿದ ಮೇಲೆ ಮಂಜುಳೆಗಿದ್ದುದು ಒಂದೇ ದಾರಿ. ಒಬ್ಬ ಸುಂದರ ಪುರುಷನ ತೆಕ್ಕೆಗೆ ಬಿದ್ದು ಮೈ ಮನಸ್ಸುಗಳನ್ನು ತಣಿಸುವುದು. ಸುಬ್ರಾಯ ಉಳ್ಳೂರರ ಸಂಪರ್ಕದಲ್ಲಿ ಸುಖ ದೊರೆಯಬಹುದು ಎಂಬ ಮಂಜುಳೆಯ ಎಣಿಕೆ ಸುಳ್ಳಾಗಲಿಲ್ಲ. ಆದರೆ ತಾಯ್ತನದ ಆಸೆ ಮಾತ್ರ ಆಸೆಯಾಗಿಯೇ ಉಳಿದುಕೊಂಡಿದೆ. ಉಳ್ಳೂರರು ಇದ್ದಕ್ಕಿದ್ದ ಹಾಗೆ ಪಾರ್ಶ್ವವಾಯು ರೋಗಕ್ಕೆ ತುತ್ತಾದರೂ ಐವತ್ತು ಮಾನಿಗೆ ಗೇಣಿ ಬರುವ ಭೂಮಿಯನ್ನು ಅವಳಿಗೆ ಉಂಬಳಿಯಾಗಿ ಕೊಟ್ಟಿದ್ದಾರೆ. ಆದರೆ ಮಂಜುಳೆಗೆ ಪೂರ್ಣ ತೃಪ್ತಿಯೆಂಬುದಿಲ್ಲ.

ದೀರ್ಘಕಾಲದ ಮೈಯ ಹಸಿವನ್ನು ಇಂಗಿಸಿದ ನಂಜಪ್ಪನವರೂ ಅವಳ ಗರ್ಭದಲ್ಲಿ 'ಇನ್ನೊಂದು ಜೀವಕ್ಕೆ ಆಸರೆ ಕೊಡಲು ಶಕ್ತರಾಗಲಿಲ್ಲ' ಕೊನೆಗೆ ಮಠದ ಸ್ವಾಮಿಗಳಾದ ಲಕ್ಷ್ಮಣ ತೀರ್ಥರೊಬ್ಬರೇ ಅವಳ ಮೈ-ಮನಸ್ಸು ಎರಡನ್ನೂ ತಣ್ಣಿಸಿದವರು. ಯಾರಿಂದಲೋ ಒತ್ತಾಯದ ವೈರಾಗ್ಯದ ಹೊಣೆಯನ್ನು ಹೊತ್ತ ಈ ಯತಿಯೂ ತೃಪ್ತನಲ್ಲ, ಮಂಜುಳೆಯ ಸಹವಾಸದಿಂದ ದೊರೆತ ಸುಖ ಅವರಿಗೂ ಪೂರ್ಣ ತೃಪ್ತಿಯನ್ನು ನೀಡಿದೆ, ಇಬ್ಬರು ಮೈಯೂ ತಣಿದಿದೆ. ಮನಸ್ಸೂ ತಣಿದಿದೆ. ಆದ್ದರಿಂದಲೇ ಲಕ್ಷ್ಮಣತೀರ್ಥರು ಆ ಊರು ಬಿಟ್ಟು ತೆರಳಿದಾಗ, ಮಂಜುಳೆಗೆ ಅನಿಸಿದ್ದು 'ದೇಹ ದೂರಕ್ಕೆ ಹೋಗಬಹುದು. ಆದರೆ ಮನಸ್ಸು ಹೋಗಲಾರದು' ಎಂದು.

ಉಳ್ಳೂರರು ಪಾರಿಜಾತದಂತಿದ್ದು ಮಂಜುಳೆಯ ಜೀವನವನ್ನು ಚೆಲುವುಗೊಳಿಸಿದ್ದಾರೆ. ಮೈಯನ್ನು ಚೇತರಿಸಿದ್ದಾರೆ. ಲಕ್ಷ್ಮಣ ತೀರ್ಥರು ಮೈಮನ ತುಂಬಿದ ಬಾಳು ಹೇಗೆ ಚೆನ್ನಾಗಿ ಮಾಗಿ ನಿಶ್ಚಿಂತೆಯಿಂದ ತೊಟ್ಟನ್ನು ಕಳಚಿ ಉದುರಬಲ್ಲದು ಎಂದು ತಿಳಿಸಿಕೊಟ್ಟಿದ್ದಾರೆ. ಮಂಜುಳೆಯ ಮನಸ್ಸಿಗೆ ಇನ್ನೇನು ಬೇಕೆಂದು ಅನಿಸಲಿಲ್ಲ 'ಮಂಚಕ್ಕೆ ನನ್ನ ಮನಸ್ಸು ಸೀಮಿತವಾಗಿರಲಿಲ್ಲ. ಮಂಚದಿಂದ ಮೈಯನ್ನು ತುಂಬಿತ್ತು. ಮೈಯಿಂದ ಮನಸ್ಸನ್ನು ತುಂಬಿತ್ತು. ನಾನು ತಂಬೂರಿಯ ದಂಡ. ಬರುಡೆ ಉಳ್ಳೂರರು ಅದರ ತಂತಿ ಆನಂದರು. ಅವರಿಬ್ಬರೂ ನನ್ನ ಜತೆಯಲ್ಲಿ ಅನುದಿನ ಇರುವುದರಿಂದ ನಾನು ಸುಮಂಗಲೇ ನಿತ್ಯ ಸುಮಂಗಲೆ' ಎನ್ನುವ ಮಂಜುಳೆ ತಾನು ಯಾರ ಹಂಗೂ ಇಲ್ಲದ ತೃಪ್ತಿಜೀವಿ ಎಂದು ಕೊಳ್ಳುತ್ತಾಳೆ. ಮೈಮನಗಳ ಸುಳಿಯಲ್ಲಿ ಸಿಲುಕಿದ ಮಂಜುಳೆಗೆ ದೊರೆತ ತೃಪ್ತಿ ಅವಳ ಮಾನಸಿಕ ಸ್ಥಿತಿಯೂ ಆಗಿ.

ಪರಿವರ್ತನೆಗೊಳ್ಳುವುದರಲ್ಲಿ ಅವಳ ಬಾಳಿಗೊಂದು ಅರ್ಥ ದೊರಕಿದಂತಾಗುತ್ತದೆ, ದಣಿದು ಸೋತ ಅವಳ ಜೀವಕ್ಕೆ ಆಗಲೇ ಸಮಾಧಾನ. ಕಾದಂಬರಿಯ ಕೇಂದ್ರ ವ್ಯಕ್ತಿಯಾದ ಇವಳೊಂದಿಗೆ ಕಾದಂತರ ಮನಸ್ಸೂ ಒಂದಾಗಿ ಅವರು ಆಕೆಯ ಕಣ್ಣಿನಿಂದಲೇ ಬಾಳಿನ ವಾಸ್ತವತೆಯನ್ನು ಅರ್ಥಮಾಡಿಕೊಳ್ಳಲು ಯತ್ನಿಸಿದ್ದಾರೆ ಎಂದೆನಿಸುತ್ತದೆ.

ಮಂಜುಳೆಯ ಮನಸ್ಸು ಒಮ್ಮೊಮ್ಮೆ ಜ್ವಾಲಾಮುಖಿಯಂತೆ ಮತ್ತೊಮ್ಮೆ ಸ್ನಿಗ್ಧ ಶೀತಲಧಾರೆಯಂತೆ ಹರಿಯುತ್ತಿತ್ತು. ವಿಚಿತ್ರ ಸಂಸ್ಕಾರವೊಂದರ ಕೈಗೊಂಬೆ ತಾನು ಎಂದು ಅವಳು ಎಣಿಸಿದ್ದು ಉಂಟು. ವೇಶ್ಯೆಯ ಬಾಳಿನ ಚಿತ್ರವನ್ನು ಕಾರಂತರು ನೀಡುವ ಉದ್ದೇಶವು ಅವರ ಉದ್ಧಾರ ಮಾಡಬೇಕೆಂದಲ್ಲ. ವೇಶ್ಯಾವೃತ್ತಿಯ ಸಾಮಾಜಿಕ ವಿಷಮತೆ ಹಾಗೂ ಅದರ ವಾಸ್ತವತೆಯನ್ನು ಇತರರ ಅರಿವಿಗೂ ತಂದು, ಸಮಸ್ಯೆಯ ಗಂಭೀರತೆಯನ್ನು ಪರಿಗಣಿಸುವಂತೆ ಮಾಡುವುದು. ಜೊತೆಗೆ ವೇಶ್ಯೆಯಾದರೂ ಅವಳ ಕಾಮನೆಗಳ ಗರ್ಭದಲ್ಲಿ ಅಡಗಿರುವ ಒಂದು ಚೆಲುವತ್ವವನ್ನು ಬಹಿರಂಗಗೊಳಿಸುವುದು. ಈ ಸಂದರ್ಭದಲ್ಲಿ ಶಾರಿಯ ಮಗಳು ಚಂದ್ರಿಯ ಪಾತ್ರ ನೆನಪಾಗುತ್ತದೆ.

ಹತ್ತೆಂಟು ತಲೆಮಾರುಗಳಿಂದ ಕುಲದ ವೃತ್ತಿಯನ್ನು ನಡೆಸಿ ಬಂದಿರುವ ಒಂದು ಕೂಸು ಮಂಜುಳೆ. ಅವಳ ಜೀವನ ಸುಖವಾಗಿಯೇ ಇತ್ತು. ಆದರೆ ಸಂತಾನದ ಕೊರತೆಯ ದುಃಖ ಮಾತ್ರ ಆಗಾಗ ಬಾಧಿಸದೆ ಇರುತ್ತಿರಲಿಲ್ಲ. ಇಂಥದೊಂದು ವೇದನೆ ಶಮನಗೊಂಡುದು ಅವಳ ತಂಗಿ ಕಪಿಲೆ ತನ್ನ ಮೂರುವರ್ಷದ ಹೆಣ್ಣುಕೂಸು ಶಾರಿಯನ್ನು ಮಂಜುಳೆಯ ಮಡಿಲಿಗೆ ಹಾಕಿದಾಗ. ಹೀಗೆ ಮಂಜುಳೆ ಶಾರಿಗೆ ತಾಯಿಯಾದಳು. ಶಾರಿಗೂ ಕುಲಕಸುಬನ್ನು ಬಿಡುವುದಾಗಲಿಲ್ಲ. ದೊಡ್ಡ ಅಮ್ಮನ ಹೇರಳ ಸಂಪತ್ತು ಅವಳ ಕೈಗೆ ಬಂದಿತ್ತಾದರೂ ಹಲವರ ವಂಚನೆಯಿಂದಾಗಿ ಅವಳ ಮಗಳು ಚಂದ್ರಿಯ ಬಾಳ್ವೆಗೆ ಎದುರಾದುದು ದಾರಿದ್ರವೇ. ಚಂದ್ರಿಯಲ್ಲಿ ವಿದ್ಯೆ ಇದೆ. ತನ್ನ ಹರಿಯದ ವೃತ್ತಿಯ ಬಗೆಗೂ ಗೌರವವಿದೆ. ಮೂರನೆಯ ತಲೆಮಾರಿನ ಚಂದ್ರಿ ವಿಚಾರವಂತೆ. ಬದುಕಿನಲ್ಲಿ ಅಜ್ಜಿ ನಡೆಸಿದ ಹೋರಾಟಗಳಿಂದ ಆಕೆಗೆ ಮದುವೆಯೂ ಬೇಡವೆನಿಸುತ್ತದೆ. ಬೇಕೆಂದರೂ ಗೆಳತಿ ಶಾರದೆಯಂತೆ ಅದು ಸುಲಭವಾಗಿ ದಕ್ಕುವ ಸಂಗತಿಯಲ್ಲ ಎಂದೂ ಅವಳಿಗೆ ತಿಳಿದಿದೆ. ಹೀಗಿದ್ದರೂ ಮಂಜುಳೆಯ ಇತಿವೃತ್ತಿ ಓದಿ ಮುಗಿಸುವಾಗ ಅವಳಿಗನ್ನಿಸಿದ್ದು 'ಒಟ್ಟಾರೆ ಮರ್ಯಾದೆಯಿಂದ ಬದುಕು ನಡೆಸಬೇಕು'.

ಜೀವನದಲ್ಲಿ ಸುಖವನ್ನು ಕಾಣಬೇಕಾದರೆ ಕೇವಲ ಗಂಡು-ಹೆಣ್ಣುಗಳು ಕೂಡಿದರೆ ಆಗಲಿಲ್ಲ. ಅದಕ್ಕಿಂತ ಮೇಲಾದ ಮನಸ್ಸೊಂದಿದೆ ಎಂಬ ಗೆಳತಿಯ ವಿಚಾರವೂ ಅವಳನ್ನು ತಟ್ಟಿ ಪರಂಪರೆಯಿಂದ ಕಳಚಿಕೊಳ್ಳುವ ದಿಕ್ಕಿನತ್ತ ಹೆಜ್ಜೆ ಇಡುವ ಸಾಹಸವನ್ನು ಹುಟ್ಟಿಸಿದೆ.

ಯಾವ ಬದುಕೇ ಆಗಲಿ ಬದುಕು ಗೌರವಿಸುವುದಕ್ಕಾಗಿ ಇರುತ್ತದೆ ಎಂದು ಅಭಿವ್ಯಕ್ತಿಗೊಳಿಸುತ್ತ ಕೌಟುಂಬಿಕವೆನಿಸುವ ಒಂದು ಸ್ಥಿರ ವ್ಯವಸ್ಥೆಯಲ್ಲಿ ಬದುಕಿನ ಗಟ್ಟಿಯಾದ ಮೌಲ್ಯ ಅಡಗಿದೆ ಎಂಬುದರ ದರ್ಶನವೇ ಕಾರಂತರ ಎಲ್ಲ ಬರಹಗಳ ಆಂತರಿಕ ಸತ್ಯ.

ವೇಶ್ಯೆಯಾದವರಿಗೂ ತಾಯ್ತನದ ಸುಖವನ್ನು ಅನುಭವಿಸಬೇಕು. ಆ ಮೂಲಕ ಈ ಸಮಾಜದ ಮೇಲಿನ ಬೇಸರ, ತಿರಸ್ಕಾರ ಎಲ್ಲವನ್ನೂ ಮರೆಯಬೇಕು ಎಂಬ ಆಸೆಯಿರುತ್ತದೆ.

ಈ ಮೇಲಿನ ಎಲ್ಲಾ ಪಾತ್ರಗಳು ಈ ಹಿನ್ನೆಲೆಯಲ್ಲಿ ಗಮನಾರ್ಹವಾಗಿವೆ. ಮಹಿಳೆಗೆ ಸಂಬಂಧಿಸಿದಂತೆ ಪಿತೃಪ್ರಧಾನ ಸಮಾಜವು ಪಾತಿವ್ರತ್ಯ, ಮಾತೃತ್ವ ಮೊದಲಾದ ಮೌಲ್ಯಗಳಿಂದ ಹೆಣ್ಣನ್ನು ಕೌಟುಂಬಿಕ ಚೌಕಟ್ಟಿನೊಳಗೆ ಬಂಧಿಸಿಡುವುದನ್ನು ಸ್ತ್ರೀವಾದಿ ಚಿಂತನೆಗಳು ಪ್ರಶ್ನಿಸುತ್ತವೆ, ವೈಯಕ್ತಿಕ ಸಾಧನೆಗಳಿಗೆ ಹೆಚ್ಚು ಮಹತ್ವ ನೀಡುವ ಆಧುನಿಕ ಹೆಣ್ಣಿಗೆ ಛಲವಂತಿಕೆ ಆಯ್ಕೆಯ ಪ್ರಶ್ನೆಯಾಗಿದೆ.

ಗರ್ಭಧಾರಣೆ, ತಾಯ್ತನಗಳು ಸಮಯ, ಸಂಯಮ ಜವಾಬ್ದಾರಿಯನ್ನು ಬೇಡುವ ಕ್ರಿಯೆಗಳು. ಇದು ಗೃಹಿಣಿಯರ ಮೂಲಭೂತ ಸಮಸ್ಯೆ. ಆದರೆ ಇದೇ ಸಂದರ್ಭದಲ್ಲಿ ಕಾರಂತರ ಕಾದಂಬರಿಗಳಲ್ಲಿ ತಾಯ್ತನ ಬಯಸುವ ವೇಶ್ಯೆಯರು ಮನಸ್ಥಿತಿಯೇನು ? ಎಂಬ ಪ್ರಶ್ನೆ ನಮ್ಮನ್ನು ಕಾಡದೆ ಇರಲಾರದು. ಆಧುನಿಕ ಹೆಣ್ಣುಗಳಿಗೆ ಇದು ಆಯ್ಕೆಯ ಪ್ರಶ್ನೆಯಾದರೆ ವೇಶ್ಯೆಯರಲ್ಲಿ ಮಾಸಿಕ ಹಿಂಸೆಯ ಪ್ರಶ್ನೆಯಾಗಿರುವುದು ವಿಪರ್ಯಾಸ ಎಂದು ಅವಲೋಕಿಸಬಹುದು. ಒಟ್ಟಾರೆಯಾಗಿ ಹೆಣ್ಣಿಗೆ ತಾಯ್ತನ ಎಷ್ಟು ಮುಖ್ಯ, ಅವಳು ಏಕೆ ತಾಯ್ತನಕ್ಕೆ ತುಂಬ ಹಾತೊರೆಯುತ್ತಾಳೆ ಎಂಬುದನ್ನರಿಯುವ ಪ್ರಯತ್ನ ಈ ಅಧ್ಯಯನ ಗ್ರಾಮೀಣ ಪರಿಸರದ ಅದರಲ್ಲೂ ದಕ್ಷಿಣ ಕನ್ನಡದ ಪ್ರಾದೇಶಿಕ ಆವರಣದಲ್ಲಿ ಅನಾವರಣಗೊಳ್ಳುವ ಕಾರಂತರ ಕಾದಂಬರಿಗಳು ಅಲ್ಲಿಯ ದಟ್ಟವಾದ ಪರಿಸರ ಹಾಗೂ ಜನಜೀವನದ ರೀತಿ-ನೀತಿಗಳನ್ನು ಪ್ರತಿಬಿಂಬಿಸುತ್ತವೆ. ಆದ್ದರಿಂದ ಆಧುನಿಕ ಸಾಂಸ್ಕೃತಿಕ ಪರಿಸರದಿಂದ ಹೊರಗೆ ಕೆಲವೇ ಕೆಲವು ಕಾದಂಬರಿಗಳನ್ನು ಗಮನಿಸಬಹುದು. ಗ್ರಾಮೀಣ ಪರಿಸರದ ಬ್ರಾಹ್ಮಣ ವಿಧವೆಯರ ಶೋಷಿತ ಬದುಕಿನ ಆವರಣ. ಅದೇ ಪರಿಸರದ ವೇಶ್ಯೆಯರ ಬದುಕು. ಪರಿತ್ಯಕ್ತೆಯರು, ವಿಶ್ವಸ್ತೆಯರು, ದಲಿತ ಸ್ತ್ರೀಯರು, ಬುಡಕಟ್ಟು ಜನರ ಸಾಂಸ್ಕೃತಿಕ ಆವರಣ ತೆರೆದುಕೊಳ್ಳುತ್ತದೆ. ಕಾರಂತರು

ವೇಶ್ಯೆಯರನ್ನು ಕೌಟುಂಬಿಕ ಚೌಕಟ್ಟಿನ ಹೊರಗಿನಿಂದ ನೋಡುವುದಿಲ್ಲ. ವೇಶ್ಯೆಯರೂ ಕೂಡಾ ಪಾತಿವ್ರತ್ಯದ ಸಾತತ್ಯವನ್ನು ಹೊಂದಿ. ಅವರ ನೋವು ನಲಿವುಗಳಿಗೆ ಸ್ಪಂದಿಸಿ, ಮಾನವೀಯ ಮೌಲ್ಯಗಳಿಗೆ ಹಾತೊರೆಯುತ್ತಾರೆ. ಗರತಿಯಾಗಿರಲಿ, ವೇಶ್ಯೆಯಾಗಿರಲಿ, ಒಬ್ಬ ಪುರುಷನಿಗಾಗಿ ಸಂಘರ್ಷಿಸುವ ಪ್ರಮೇಯವೇ ಇಲ್ಲಿ ಉದ್ಭವಿಸುವುದಿಲ್ಲ.

'ಮೈಮನಗಳ ಸುಳಿಯಲ್ಲಿ'ಯ ಭವಾನಿ ಮಂಜುಳೆ, 'ಧರ್ಮರಾಯನ ಸಂಸಾರ', 'ಬತ್ತದ ತೊರೆ'ಯ ವಿನುತೆ ಹಾಗೂ ಚಂದ್ರಿ ತಮ್ಮ ವೇಶ್ಯಾವೃತ್ತಿಯನ್ನು ಧಿಕ್ಕರಿಸಿ ಹೊಸ ಬದುಕಿನ ಹಂಬಲದ ಆಶಯಗಳನ್ನು ಮಗಳ ಮದುವೆ ಮಾಡುವ ಮೂಲಕ ವೃತ್ತಿಗೆ ತಿಲಾಂಜಲಿಯನ್ನೀಯುತ್ತಾರೆ. 'ಕನ್ಯಾಬಲಿ'ಯ ಮಾಲತಿಯಂತೂ ಇಡೀ ಸಾಮಾಜಿಕ ವ್ಯವಸ್ಥೆಯನ್ನೇ ವಿರೋಧಿಸುತ್ತಾಳೆ. 'ಜಾರುವ ದಾರಿಯಲ್ಲಿ'ಯ ಗುಲಾಬಿ ತನ್ನ ಕೆಟ್ಟದಾರಿಯನ್ನು ಬಿಟ್ಟು ಸಮಾಜಸೇವೆಯಲ್ಲಿ ತನ್ನನ್ನು ತಾನು ತೊಡಗಿಸಿಕೊಳ್ಳುವ ಸಂಗತಿ-ಇತ್ಯಾದಿ ಅಂಶಗಳು ವೇಶ್ಯೆಯರ ಬಗ್ಗೆ ಇರುವ ಸಾಮಾಜಿಕ ಅನಾದರವನ್ನು ಖಂಡಿಸುವ ಕಾರಂತರು ಅವರಲ್ಲಿ ಜೀವಪರ ಮೌಲ್ಯಗಳನ್ನು ದಾಖಲಿಸುತ್ತಾರೆ. ಹೆಣ್ಣನ್ನು ಹೆಣ್ಣಾಗಿ ನೋಡುವ ವಸ್ತುನಿಷ್ಠತೆ. ಸ್ತ್ರೀಸಂವೇದನೆಯ ಅಂತಃಕರಣ ಕಾರಂತರಲ್ಲಿ ಮೂಲಸೆಲೆಯಾಗಿಯೇ ಹರಿದಿದೆ. ಸ್ತ್ರೀವಾದ ಹೊಸ ಹೊಳಹುಗಳಿಗೆ ಅವರ ಕಾದಂಬರಿಗಳು ವಿಶಿಷ್ಟ ಕೊಡುಗೆಯ ರೂಪಗಳಾಗಿ ಕಂಡು ಬರುತ್ತವೆ.

ನೈತಿಕ ಪ್ರಶ್ನೆ ಬಂದಾಗ ಸ್ತ್ರೀ ಶೀಲ-ಅಶ್ಲೀಲ, ಪವಿತ್ರ-ಅಪವಿತ್ರ, ಶುದ್ಧ-ಅಶುದ್ಧ, ನೀತಿ ಧೋರಣೆಗಳನ್ನು ಎದುರಿಸಬೇಕಾಗುತ್ತದೆ. 'ನಂಬಿದವರ ನಾಕ ನರಕ'ದ ಸತ್ಯಭಾಮೆಗೆ ಹಾದರದ ಅಪವಾದ ಹೊರಿಸುವುದು. ಲೈಂಗಿಕ ಅಪವಾದಕ್ಕೊಳಗಾಗುವುದು. 'ಧರ್ಮರಾಯನ ಸಂಸಾರ'ದ ಸರಸ್ವತಿ ಇವರೆಲ್ಲಾ ಪ್ರತಿಭಟನಾತ್ಮಕ ಹಿನ್ನೆಲೆಯಲ್ಲಿ ತಮ್ಮ ಅಸ್ತಿತ್ವವನ್ನು ಹುಡುಕುತ್ತಾರೆ. ಆದರೆ, 'ಮರಳಿ ಮಣ್ಣಿಗೆ'ಯಂಥ ಎಷ್ಟೋ ಗಂಡಸರು ವಿವಾಹೇತರ ಸಂಬಂಧವಿಟ್ಟುಕೊಳ್ಳುವುದನ್ನು ಕಾರಂತರು ಅದರ ದುಷ್ಪರಿಣಾಮಗಳನ್ನು ಎಚ್ಚರಿಕೆಯಿಂದ ವಿವರಿಸುತ್ತಾರೆ. ಮತ್ತು, ಸ್ತ್ರೀ-ಪುರುಷರ ಸಂಬಂಧವನ್ನು ಮುಖ್ಯ ತಾತ್ವಿಕ ನೆಲೆಯಾಗಿ ಸ್ವೀಕರಿಸುತ್ತಾರೆ. ಅಲ್ಲಿನ ಸ್ತ್ರೀ ವಿವಾಹದ ಚೌಕಟ್ಟಿನೊಳಗಿದ್ದು, ಏಕಪತಿತ್ವವನ್ನು ನಿರಾಕರಿಸುವ ಸ್ತ್ರೀಯರು ಅದರ ಹಿಂದಿನ ಹಂಬಲವಾದ ಶಾಯ್ತನವನ್ನು ಬಯಸುತ್ತಾರೆ.

ವಿಭಿನ್ನ ಮನೋಭಾವದ ಸ್ತ್ರೀಯರು ಇಲ್ಲಿ ಕಂಡು ಬರುತ್ತಾರೆ. ಹಾಗೆಯೇ ಏಕಪತಿತ್ವ ಒಪ್ಪುವ ಗರತಿಯರು. ಒಪ್ಪದವರು. ವೈಧವ್ಯವನ್ನು ಒಪ್ಪುವವರು. ಒಪ್ಪದವರು ಹೀಗೆ ಪರಂಪರೆಯ

ಸ್ವೀಕರಿಸುವ ಸ್ವೀಕರಿಸದ ವಿಭಿನ್ನ ಮನೋಭಾವದ ಸ್ತ್ರೀಯರು ಕಾರಂತರ ಕಾದಂಬರಿಗಳಲ್ಲಿ ಕಾಣಿಸಿಕೊಳ್ಳುತ್ತಾರೆ.

ದುಡಿಮೆ ಕಾರಂತರ ಕಾದಂಬರಿಗಳ ಸ್ತ್ರೀಯರು ಕಂಡುಕೊಂಡ ಬಹು ಮುಖ್ಯ ಅಂಶಗಳಲ್ಲಿ ಒಂದಾಗಿದೆ. ತನ್ನ ಜೀವಿತದ ಅವಧಿಯಲ್ಲಿ ಕಠಿಣ ಪರಿಸ್ಥಿತಿಯನ್ನು ನಿಭಾಯಿಸಿಕೊಂಡು ಹೋಗುವ ಸಹನೆಯನ್ನು ಕಾರಣಬಹುದು, ಗಂಡಸರ ಹೊಣೆಗಾರಿಕೆಯಿಲ್ಲದ ಜೀವನ, ಬದುಕನ್ನು ನಿಭಾಯಿಸಲಾರದ ಗಂಡುಗಳು ಮನೆಯಿಂದಲೇ ಪಲಾಯನ ಮಾಡಿ ದೇಶಾಂತರ ಹೋದಾಗ ಮಕ್ಕಳ ಲಾಲನೆ-ಪಾಲನೆಯೊಂದಿಗೆ ಹೊಲಗದ್ದೆಗಳಲ್ಲಿ ಮೈ-ಮುರಿದು ದುಡಿಯುವ ಸ್ತ್ರೀಯರು ನಿಜವಾಗಿಯೂ ಸ್ವಾಭಿಮಾನಿಗಳಾಗುತ್ತಾರೆ.

'ಧರ್ಮರಾಯನ ಸಂಸಾರ' 'ನಂಬಿದವರ ನಾಕ ನರಕ', 'ಸರಸಮ್ಮನ ಸಮಾಧಿ', 'ಚೋಮನದುಡಿ', 'ಕುಡಿಯರ ಕೂಸು' ಮುಂತಾದ ಕಾದಂಬರಿಗಳಲ್ಲಿ ಕಾರಂತರು ಪ್ರತಿಪಾದಿಸುವ ಸ್ತ್ರೀ ಲೈಂಗಿಕತೆಯನ್ನು ಉದಾರವಾದಿ ಮಾನವೀಯತೆಯಿಂದಲೇ ನೋಡಬೇಕಾಗುತ್ತದೆ. ಈ ಪ್ರಕ್ರಿಯೆ ಗರತಿಯರಾದ ಕೆಲವರಲ್ಲಿಯೂ ತಾಯ್ತನದ ಹಂಬಲವಾಗಿ ಕಾಡುತ್ತದೆ. ವಿವಾಹದ ಚೌಕಟ್ಟಿನ ಹೊರಗಿನ ಸಂಬಂಧವನ್ನು ಕಾರಂತರು ಅದು ಪರಿಸ್ಥಿತಿಯ 'ಅನಿವಾರ್ಯ'ವಾಗಿಯೇ ಅಥವಾ 'ಆಕಸ್ಮಿಕ'ವಾಗಿಯೇ ತರುತ್ತಾರೆ, ಯಾಂತ್ರಿಕವಾದ ಜೀವನ ಕ್ರಮವು ಅಪಾರವಾದುದು 'ಧರ್ಮರಾಯನ ಸಂಸಾರ'ದ ಸರಸ್ವತಿಯ ನಡವಳಿಕೆಯನ್ನು ನೋಡಿದಾಗ ಅದು ಮನುಷ್ಯ ಸಹಜ 'ದೌರ್ಬಲ್ಯ'ವಾಗಿ ಕಂಡು ಬರುತ್ತದೆ, ಸರಸ್ವತಿ, ಪ್ರತಿಭಟನೆ ರೂಪದಲ್ಲಿ ನಡೆದುಕೊಂಡರೂ ಅದು ಅವಳ ಅತೃಪ್ತ ಬಯಕೆಯಾಗಿ ಕಾರಂತರು ಕಾಣಿಸುತ್ತಾರೆ. ದುಡಿಮೆ ಕಾರಂತರ ಕಾದಂಬರಿಗಳ ಸ್ತ್ರೀಯರು ಕಂಡುಕೊಂಡ ಬಹುಮುಖ್ಯ ಅಂಶಗಳಲ್ಲಿ ಒಂದಾಗಿದೆ. ತನ್ನ ಜೀವಿತದ ಅವಧಿಯಲ್ಲಿ ಕಠಿಣ ಪರಿಸ್ಥಿತಿಯನ್ನು ನಿಭಾಯಿಸಿಕೊಂಡು ಹೋಗುವ ಸಹನೆಯನ್ನು ಕಾಣಬಹುದು. ಗಂಡಸರ ಹೊಣೆಗಾರಿಕೆಯಿಲ್ಲದ ಜೀವನ, ಬದುಕನ್ನು ನಿಭಾಯಿಸಲಾರದ ಗಂಡುಗಳು ಮನೆಯಿಂದಲೇ ಪಲಾಯನ ಮಾಡಿ ದೇಶಾಂತರ ಹೋದಾಗ ಮಕ್ಕಳ ಲಾಲನೆ-ಪಾಲನೆಯೊಂದಿಗೆ ಹೊಲಗದ್ದೆಗಳಲ್ಲಿ ಮೈಮುರಿದು ದುಡಿಯುವ ಸ್ತ್ರೀಯರು ನಿಜವಾಗಿಯೂ ಸ್ವಾಭಿಮಾನಿಗಳಾಗುತ್ತಾರೆ.

'ಮರಳಿ ಮಣ್ಣಿಗೆ'ಯ ಸರಸೋತಿ-ಪಾರೋತಿ, ನಾಗವೇಣಿ, ಸತ್ಯಭಾಮೆ, ಕರುಳಿನಕರೆ, ಕಾದಂಬರಿಯ ಭಾಗೀರಥಿ ಮತ್ತು ವೆಂಕಮ್ಮ, ಇಡೀ ಸಂಸಾರದ ಕೇಂದ್ರ ಬಿಂದುವಾಗಿ ದುಡಿಯುವ 'ಚೋಮನದುಡಿ'ಯ ಬೆಳ್ಳಿ, ಇಳೆ ಕಾದಂಬರಿಯ ಜ್ವಾಲಾ ಕುಲಕರ್ಣಿ ಹಾಗೂ

ಅರುಂಧತಿ ಪಾಟೀಲ-ಮುಂತಾದವರು ಸ್ವತಂತ್ರ ಬದುಕು, ಸ್ವಾವಲಂಬಿಗಳಾಗಿ ಉದ್ಯೋಗ ನಿರತರಾಗುವುದನ್ನು ಕಾರಂತರು ತಮ್ಮ ಕಾದಂಬರಿಗಳಲ್ಲಿ ಸಮಾವೇಶಗೊಳಿಸುತ್ತಾರೆ ಎಂಬುದು ಕಾದಂಬರಿಗಳನ್ನು ಓದಿದಾಗ ತಿಳಿಯುತ್ತದೆ. ಏಕೆಂದರೆ ಕಾರಂತರು ಕಾದಂಬರಿಯ ಆವರಣವನ್ನು ಈ ಎಲ್ಲಾ ಮೂಲಗಳಿಗೂ ಆಂತರಿಕ ಸಂಬಂಧವನ್ನಿಟ್ಟುಕೊಂಡು ಇಡೀ ಸಮಾಜವನ್ನು ಅವಲೋಕನ ಮಾಡುತ್ತಾರೆ. ಮನುಷ್ಯ ಸ್ವಭಾವದ ಎಲ್ಲಾ ಬಗೆಯ ಗುಣಗಳನ್ನು ಕಾರಂತರು ಗ್ರಹಿಸುತ್ತಾರೆ.

'ಓಂಟಿದನಿ'ಯ ಕಾಂತಿಯೂ ಸಹ ತನ್ನ ಮುದಿಗಂಡ ಚಂದೂಲಾಲರ ಇಬ್ಬಂದಿತನಕ್ಕೆ ರೋಸಿ ಹೋಗಿ ಅನಂತಕೃಷ್ಣನೆಂಬ ಒಬ್ಬ ವಿಮರ್ಶಕನೊಂದಿಗೆ ಗುಪ್ತ ಪ್ರಣಯವನ್ನಿರಿಸಿ ಕೊಳ್ಳುತ್ತಾಳೆ. 'ಸರಸಮ್ಮನ ಸಮಾಧಿ'ಯ ಸರಸಮ್ಮ ಕೂಡಾ ರೋಗಿಷ್ಟ ಗಂಡನೊಂದಿಗೆ ಯಾವ ಲೈಂಗಿಕ ಸುಖವನ್ನೂ ಪಡೆಯದ ಅತೃಪ್ತಕಾಮಿಯಾಗಿದ್ದಾಳೆ. ಇದೊಂದು ಬಗೆಯಲ್ಲಿ ಕಾರಂತರು ಸಾಮಾಜಿಕ ವ್ಯಂಗ್ಯವೂ, ಆತ್ಮ ವಿಮರ್ಶೆಯೂ ಆಗುವಂಥ ವೈಚಾರಿಕ ಚಿಂತನೆಯನ್ನು ಮನುಷ್ಯನಲ್ಲಿ ಉಂಟು ಮಾಡುತ್ತದೆ.

ಆದರ್ಶ ದಾಂಪತ್ಯವೆಂದರೆ ಅದು ಗಂಡು ಹೆಣ್ಣಿನ ಸಾಂಸಾರಿಕ ಹೊಣೆಗಾರಿಕೆಯನ್ನು ಪ್ರತಿನಿಧಿಸುತ್ತದೆ. ತಾಯ್ತನವು ಹೆಣ್ಣಿಗೆ ಅನಿವಾರ್ಯವಾದಂತೆ ಗಂಡಿಗೂ ಸಹ ತಂದೆತನದ ಜವಾಬ್ದಾರಿ ಸಹಜವಾಗಿರುತ್ತದೆ. ನಮ್ಮ ರೂಢಿ ಸಂಪ್ರದಾಯಗಳು ಅವುಗಳನ್ನು ಹೆಣ್ಣಿಗೆ ಮಾತ್ರ ಸಹಜವೆಂಬಂತೆ ಆರೋಪಿಸುವುದರ ಮೂಲಕ ಪುರುಷನನ್ನು ಹೊಣೆಗಾರಿಕೆಯಿಂದ ದೂರ ಉಳಿಸಿ ಬಿಡುತ್ತವೆ.

ವೈಧವ್ಯದ ಪರಿಕಲ್ಪನೆಗೆ ಕಾರಂತರು ತೀವ್ರವಾಗಿ ಪ್ರತಿಕ್ರಿಯಿಸುತ್ತಾರೆ. ವೈದಿಕ ಸಂಪ್ರದಾಯದ ಬ್ರಾಹ್ಮಣರು ವೈಧವ್ಯವನ್ನು ಒಂದು ಸಾರ್ವತ್ರಿಕ ಸಮನ್ವಯವಾಗಿ ಕಾಣುತ್ತಾರೆ. ಅದನ್ನು ವೈಭವೀಕರಿಸುವುದರ ಮೂಲಕ ಹದಿಹರೆಯದಲ್ಲೇ ಅಕಾಲ ಮರಣಕ್ಕೆ ಬಲಿಯಾದ ಎಷ್ಟೋ ಬ್ರಾಹ್ಮಣ ವಿಧವೆಯರ ಕತ್ತಲೆಯ ಬಾಳು ಅಲ್ಲಿಯೇ ಕಮರಿ ಹೋಗುತ್ತದೆ. ಅವರು ಅನುಭವಿಸುವ ನರಕಯಾತನೆ, ಪುರುಷರ ಶೋಷಣೆ ದೌರ್ಜನ್ಯಗಳನ್ನು ಕಾರಂತರು ಉಗ್ರವಾಗಿಯೇ ಖಂಡಿಸಿದ್ದಾರೆ. 'ಕನ್ಯಾಬಲಿ' ಕಾದಂಬರಿ ಬ್ರಾಹ್ಮಣ ಸ್ತ್ರೀಯರ ವೈಧವ್ಯದ ಬದುಕನ್ನು ಹೇಗೆ ನರಕವನ್ನಾಗಿಸಲಾಗಿತ್ತು ಎಂಬುದರ ಪ್ರಾತಿನಿಧಿಕ ಕಾದಂಬರಿಯಾಗಿದೆ ವಿಶೇಷವಾಗಿ ಶಿವರಾಮಕಾರಂತರು ಕಾದಂಬರಿಯಲ್ಲಿ ವೃದ್ಧೆಯರು, ಅದರಲ್ಲಿಯೂ ವಿಧವೆಯರ

ಜೀವನದ ಅನಾವರಣ ಮಾಡುತ್ತಾರೆ. ಇದು ಕಾರಂತರ ಸಾಮಾಜಿಕ ಕಳಕಳಿ, ಸಾಮಾಜಿಕ ಪ್ರಜ್ಞೆ ಸ್ತ್ರೀ ಅಂತಃಕರಣ–ಇತ್ಯಾದಿ ಅಂಶಗಳನ್ನು ಪ್ರತಿನಿಧಿಸುತ್ತದೆ.

ಹಿಂದೂ ಸಮಾಜದಲ್ಲಿ 'ವಿಧವೆ' ಎಂದರೆ–ಅಮಂಗಳ ಕೇಡು, ಸಮೃದ್ಧಿ ಹೀನತೆ, ಪ್ರಯೋಜನಕ್ಕೆ ಬಾರದ 'ವಸ್ತು' ವಾಗಿಯೇ ಪರಿಗಣಿಸಲ್ಪಟ್ಟಿದ್ದಾಳೆ. ಪ್ರಗತಿಪರ ಚಿಂತನೆ. ವೈಚಾರಿಕ ದೃಢತೆ ಬಂಡುಕೋರತನ ಕಾರಂತರನ್ನು ಎಚ್ಚರಿಸಿ, ಸಾಮಾಜಿಕ ಪ್ರಗತಿಗೆ ಪೂರಕವಾಗಿ ಅವರನ್ನು ನಿರ್ಮಿಸಿವೆ. ವಿಧವೆಯರ ಹೀನಾಯ ಜೀವನ, ಮುತ್ತೈದೆ ತನದ ವೈಭವೀಕರಣವನ್ನು ಸಮಾಜ ಪರಿಗಣಿಸಿದೆ. ಹೀಗೆ ವಿಧವೆಯರನ್ನು ಕೆಲಸಕ್ಕೆ ಬಾರದವರೆಂದು ಪರಿಗಣಿಸಿ ಅವರನ್ನು ಅವಜ್ಞೆಗೆ ಒಳಪಡಿಸಲಾಗಿದೆ. ಕಾರಂತರು ಹೀಗೆ ಸ್ತ್ರೀಯರ ಮೇಲಿನ ದೌರ್ಜನ್ಯ ಶೋಷಣೆಗಳನ್ನು ಬಯಲಿಗೆಳೆಯುತ್ತಾರೆ. ಹುಟ್ಟಿನಿಂದ ಯಾವ ಸುಖವನ್ನೂ ಕಾಣದೆ ದಾಂಪತ್ಯ ಸುಖವೂ ಇಲ್ಲದೆ, ಹೆಚ್ಚಾಗಿ ಏಕಾಕಿಯಾಗಿಯೇ, ಮೂಲೆಯಲ್ಲಿ ಮೌನವಾಗಿ ಕಾಲ ಕಳೆದ ಮೂಕಜ್ಜಿ ಮಾಗಿದ ವಯಸ್ಸಿನಲ್ಲಿ ವೈಚಾರಿಕತೆಯ ದರ್ಶನ ಮಾಡುವುದು. 'ಮೂಕಜ್ಜಿಯ ಕನಸುಗಳು' ಕಾದಂಬರಿಯಲ್ಲಿ ಕಂಡು ಬರುತ್ತದೆ, ಕಾರಂತರು ಮೂಕಜ್ಜಿಯನ್ನು ವಿಶಿಷ್ಟ ವ್ಯಕ್ತಿಯಾಗಿ, ಮಹಾನ್ ದಾರ್ಶನಿಕ ತತ್ವಜ್ಞಾನಿಯಾಗಿ ಕಾಣುತ್ತಾರೆ. 'ಮರಳಿ ಮಣ್ಣಿಗೆ'ಯ ಸರಸೋತಿ, 'ಕರುಳಿನಕರೆ'ಯ ವೆಂಕಮ್ಮ 'ಇನ್ನೊಂದೇ ದಾರಿ' ಗಂಗಮ್ಮ, ಹೊನ್ನಜ್ಜಿ ಅಳಿದ ಮೇಲೆ ಕಾದಂಬರಿಯ ಪಾರ್ವತಿ, ಮೂಕಾಂಬಿಕೆ, 'ಸನ್ಯಾಸಿಯ ಬದುಕು' ಕಾದಂಬರಿಯ ರುಕ್ಮಾಯಿ, 'ನಂಬಿದವರ ನಾಕ ನರಕ'ದ ಸಿಂಗಾರಮ್ಮ 'ಸಾವಿತ್ರಿ', 'ಶನೀಶ್ವರನ ನೆರಳಿನಲ್ಲಿ' ಕಾದಂಬರಿಯ ಕಾವೇರಮ್ಮ ಮುಂತಾದವರು ವೈಧವ್ಯ ಪ್ರಾಪ್ತಿಯಾದರೂ ಸಹ ತಮ್ಮ ಶ್ರಮ, ಬದುಕಿನ ಆಶಯಗಳೊಂದಿಗೆ ಹೋರಾಡಿ ಯಶಸ್ಸಿನ ಜೀವನ ನಡೆಸುತ್ತಾರೆ. ಕಾರಂತರು ವಿಶ್ಲೇಷಿಸುವಂತೆ ಬ್ರಾಹ್ಮಣ ಕುಟುಂಬದಲ್ಲಿ ಮಾತ್ರ ವಿಧವಾ ಸಮಸ್ಯೆಯನ್ನು ಒಂದು ಸಾಂಪ್ರದಾಯಿಕ ಆಚರಣೆಯಾಗಿ ಬೆಳೆಸಲಾಗುತ್ತಿದೆ, ಆದರೆ ಶ್ರಮಿಕ ವರ್ಗ ಅಥವಾ ಶೂದ್ರ ವರ್ಗದಲ್ಲಿ ಈ ಬಗೆಯ ಆಚರಣೆ ಕಂಡು ಬರುವುದಿಲ್ಲ. ಕಾರಂತರ ಕಾದಂಬರಿಗಳ ಅಧ್ಯಯನ. ಈ ದೃಷ್ಟಿಯಿಂದ ಒಂದು ಕುತೂಹಲಕರ ಅಧ್ಯಯನವಾಗುತ್ತದೆ.

ಕಾರಂತರ ದೃಷ್ಟಿಯಲ್ಲಿ ಇಂತಹ ವಿಧವೆಯರು. ವೃದ್ಧೆಯರು ಕೆಲಸಕ್ಕೆ ಬಾರದ, ಬೌದ್ಧಿಕವಾಗಿ ಕುಂದಿದ. ಅರಳು ಮರುಳಿನ ಭ್ರಮಾ ಜೀವಿಗಳಲ್ಲ. ಪ್ರಕೃತಿಯಂತೆ ಚೇತೋಹಾರಿಯಾದ ಮನಸ್ಸುಳ್ಳ, ಸಾವಿನ ಬಗೆಗೆ ಲಘುವಾಗಿ ಅಷ್ಟೇ ನಿರ್ಭೀತಿಯಿಂದ

ಮಾತನಾಡಬಲ್ಲ ಪರಂಪರೆಯೊಳಗಿದ್ದೂ ಜೀವನ ದೃಷ್ಟಿಯನ್ನು ಬದಲಿಸಬಲ್ಲ ಕಾಲದ ವ್ಯಕ್ತಿಗಳಾಗಿ ಗೌರವಕ್ಕೆ ಪಾತ್ರರಾಗಿದ್ದಾರೆ ಎನ್ನಬಹುದು.

ಕಾರಂತರ ಕಾದಂಬರಿ ಪ್ರಪಂಚದ ಸ್ತ್ರೀಯರು ಕ್ರಿಯಾಶೀಲತೆಯ ಸಂಕೇತವಾಗಿದ್ದಾರೆ. ಜೊತೆಗೆ ಆಧುನಿಕ ಶಿಕ್ಷಣದ ಪರಿಣಾಮವನ್ನು ತೆರೆದಿಡುತ್ತಾರೆ. ಇದರಿಂದ ಕಾರಂತರ ಕಲಾ ಅಭಿವ್ಯಕ್ತಿಯ ಪ್ರತಿಮೆಗಳ ಅನಾವರಣವನ್ನು ಕಾಣಬಹುದಾಗಿದೆ.

ದೈವಕೇಂದ್ರಿತ ಸ್ತ್ರೀ ಪ್ರತೀಕಗಳನ್ನು ಕಾರಂತರು ಕಾದಂಬರಿಗಳ ಮೂಲಕ ಕಂಡುಕೊಳ್ಳುವ ಪ್ರಯತ್ನವೂ ಕೂಡ ಆಗಿದೆ. ಅನಾದಿ ಕಾಲದಿಂದಲೂ ಸ್ತ್ರೀಯನ್ನು ಪೂಜನೀಯವಾಗಿ ಕಂಡಿರುವ ಅಂಶಗಳೂ ಇವೆ. ಕ್ರಮೇಣ ಅವರನ್ನು ತೀರಾ ಹೀನವಾಗಿ ಚಿತ್ರಿಸುವುದರ ಮೂಲಕ ಅನರ್ಥವನ್ನು ಕಲ್ಪಿಸಲಾಗಿದೆ. 'ಶಕ್ತಿಯ ಉಪಾಸನೆ'ಯು ಸ್ತ್ರೀಯ ಆರಾಧನೆಯ ಒಂದು ಅಂಗವಾಗಿದೆ. 'ಎಲ್ಲಿ ಸ್ತ್ರೀಯರು ಪೂಜಿಸಲ್ಪಡುವವರೋ ಅಲ್ಲಿ ದೇವತೆಗಳು ಸಂತೃಪ್ತರಾಗುತ್ತಾರೆ' ಎಂಬ ವೇದೋಕ್ತಿಯೂ ಇದೆ. ಸ್ತ್ರೀ ದೈವಿಕತೆಯ ತತ್ವ ಭಾರತದಲ್ಲಿ ಮೂಡಿಬಂದಿದೆ. ಮಾತೃ ಆರಾಧನೆಗಳಲ್ಲಿ ಈ ಅನೇಕ ಬಗೆಯ ಸಂಪ್ರದಾಯದ ಪ್ರಕ್ರಿಯೆ ಕಂಡು ಬರುತ್ತದೆ.

## ಕೊನೆ ಟಿಪ್ಪಣಿ


೧. ಟಿ.ಪಿ. ಅಶೋಕ : ಶಿವರಾಮ ಕಾರಂತರ ಎರಡು ಅಧ್ಯಯನಗಳು, ಅಕ್ಷರ ಪ್ರಕಾಶನ, ಹೆಗ್ಗೋಡು–೧೯೯೧, ಪುಟ – ೪೨.

೨. ಡಾ. ಕೆ. ಶ್ರೀಪತಿ ಹಳಗುಂದ ಕನ್ನಡ ಕಾದಂಬರಿಗಳಲ್ಲಿ ವೇಶ್ಯೆಯರ ಜೀವನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು–೨೦೦೮, ಪುಟ ೨೦೧.

೩. ಶಿವರಾಮಕಾರಂತರ ಮೈಮನಗಳ ಸುಳಿಗಳಲ್ಲಿ, ಹರ್ಷ ಪ್ರಕಟನಾಲಯ, ಪುತ್ತೂರು–೧೯೭೦, ಪುಟ – ೭೪





೪. ಅದೇ ಪುಟ – ೭೬

೫. ಎಸ್.ಎಲ್. ಭೈರಪ್ಪನವರ ಗೃಹಭಂಗ ಕಾದಂಬರಿ, ಸಾಹಿತ್ಯ ಭಂಡಾರ, ಜಂಗಮ ಮೇಸ್ತ್ರಿ ಗಲ್ಲಿ ಬಳೇಪೇಟೆ, ಬೆಂಗಳೂರು–೫೩, (೫ನೇ ಮುದ್ರಣ–೨೦೦೧) ಪುಟ – ೧೪೪.

೬. ಡಾ. ಶಿವರಾಮಕಾರಂತರ ಧರ್ಮರಾಯನ ಸಂಸಾರ, ಹರ್ಷ ಪ್ರಕಟನಾಲಯ, ಪುತ್ತೂರು–೧೯೭೨, ಪುಟ – ೯೦.

# ಅಧ್ಯಾಯ – ೦೪

## ಮಾನವೀಯ ಅಂತಃಕರಣ – ಲೈಂಗಿಕ ಸಂಬಂಧ

ಕಾರಂತರ ಬಹು ಮಹತ್ವಾಕಾಂಕ್ಷೆಯ ಕೃತಿಯಾದ 'ಮರಳಿ ಮಣ್ಣಿಗೆ' ೧೮೫೦ರಿಂದ ಆರಂಭವಾಗುವ ಈ ಕೃತಿಯ ಕಥಾವಸ್ತು ೧೯೪೦ಕ್ಕೆ ಮುಗಿಯುತ್ತದೆ. ೯೦ ವರ್ಷಗಳ ಮೂರು ತಲೆಮಾರುಗಳ ಜೀವನಾನುಭವ ಬಡತನದ ಬಾಳಿನ ಅನಾವರಣ ಕೃತಿಯಲ್ಲಿ ವಿಜೃಂಭಿಸುತ್ತದೆ. ಮನುಷ್ಯನ ಬಾಳ್ವೆಯ ಸಾರ್ಥಕತೆ ವ್ಯಕ್ತಿ ಸಾಗುವ ದಾರಿ ಮತ್ತು ತೆಗೆದುಕೊಳ್ಳುವ ನಿರ್ಧಾರಗಳನ್ನು ಅವಲಂಬಿಸಿರುತ್ತದೆ. ಸಾಗುವ ದಾರಿಯಲ್ಲಿ ಬರುವ ಕಡುಕಷ್ಟಗಳ ಮೈಲುಗಳು ವ್ಯಕ್ತಿಯ ಜೀವನವನ್ನು ದಾಖಲಿಸುತ್ತವೆ. ಅಷ್ಟೇ ಅಲ್ಲ ಅವನ ವ್ಯಕ್ತಿತ್ವವನ್ನು ಪ್ರಖರಗೊಳಿಸುತ್ತವೆ. 'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿ ರಾಮ ಐತಾಳರು ಅನುಸರಿಸುವ ಜೀವನ ಮಾರ್ಗ ಮತ್ತು ಅವರು ಜೀವನ ಪಥಿಕರೊಂದಿಗೆ ಸಾಗುವ ಹೆಜ್ಜೆ ಗುರುತುಗಳು ಆದರ್ಶನೀಯವೆನಿಸದಿದ್ದರೂ ಸಮರ್ಥ ತೀರ್ಮಾನಗಳೆನಿಸುತ್ತವೆ.

ಪುರೋಹಿತ ಕಾರ್ಯಗಳನ್ನು ಮಾಡುವುದರ ಜೊತೆಗೆ ಇರುವ ಆಸ್ತಿಯ ಹೊಣೆಗಾರಿಕೆಯನ್ನು ಮಾಡುತ್ತಾ ಜೀವನ ಸಾಗಿಸುವ ಐತಾಳರು ಮಾನವೀಯ ಮೌಲ್ಯಗಳನ್ನು ಅನುಷ್ಠಾನಕ್ಕೆ ತರಲು ಯತ್ನಿಸುತ್ತಾರೆ. ಹೆಂಡತಿ ಪಾರ್ವತಿ ಮತ್ತು ತಂಗಿ ಸರಸೋತಿಯರ ಜೊತೆಗೆ ಜೀವನ ನಡೆಸುತ್ತಾರೆ. ಪಾರೋತಿಯ ಹೊಟ್ಟೆಯಲ್ಲಿ ಮಕ್ಕಳಾದ್ದರಿಂದ ಎರಡನೆಯ ಮದುವೆಯಾಗಿ ಸತ್ಯಭಾಮೆಯನ್ನು ಕರೆತಂದರು. ಸತ್ಯಭಾಮೆಯು ಮನೆಗೆ ಬಂದಂದಿನಿಂದ ಸಮಸ್ಯೆಗಳ ಉದ್ಭವ ಉಂಟಾಗುತ್ತದೆ.

ಅವಳ ಒಡಲಲ್ಲಿ ಲಚ್ಚ, ಸುಬ್ಬಿ ಎಂಬ ಎರಡು ಮಕ್ಕಳು ಹುಟ್ಟುತ್ತವೆ. ಕಾರಂತರು ಇಲ್ಲಿ ಮೊದಲ ಹೆಂಡತಿಯ ಹೊಟ್ಟೆಯಲ್ಲಿಯೇ ಸಂತಾನವನ್ನು ಬೆಳೆಸಬಹುದಿತ್ತು. ಅಥವಾ ದತ್ತು ಪುತ್ರನ ಮೂಲಕ ವಂಶೋದ್ಧಾರಕನನ್ನು ಪಡೆಯಬಹುದಿತ್ತು. ಇನ್ನೊಂದು ಮದುವೆ ಮಾಡುವ ಪ್ರಯತ್ನ ಏಕೆ ಮಾಡಿದರು ? ಎಂಬ ಪ್ರಶ್ನೆಗೆ ಮಲತಾಯಿಯ ಮಮತೆಯನ್ನು ಸವತಿಯ ಅಕ್ಕರೆಯನ್ನು ಮತ್ತು ಸವತಿ ಮಗನ ಪ್ರೀತಿಯನ್ನು ಮಾನವೀಕರಣದ ಚೌಕಟ್ಟಿನಲ್ಲಿಡಬೇಕಿತ್ತು. ಸಾಹಿತ್ಯ ಕಲೆಗಳಲ್ಲಿ ಮಲತಾಯಿಯನ್ನು ಕ್ರೂರಳನ್ನಾಗಿಯೂ, ಸವತಿಯನ್ನು ಸೇವಕಿಯಂತೆಯೂ ಚಿತ್ರಿಸಿ–ಗಂಡನನ್ನು ಅಸಹಾಯಕನನ್ನಾಗಿಯೋ ಅಥವಾ ಹೆಂಡತಿಯ ಗುಲಾಮನಂತಾಗಿಯೋ ಚಿತ್ರಿಸಲಾಗಿದೆ.

ಈ ಚಿತ್ರಣಗಳಿಗಿಂತಲೂ ಭಿನ್ನತೆಯನ್ನು ಮೆರೆಯಬೇಕಾದದ್ದು ಕಾರಂತರ ವೈಶಿಷ್ಟ್ಯ ಹಾಗಂತಲೇ ಪಾರೋತಿಯಂತಹ ಪತ್ನಿಯನ್ನು ಅಕ್ಕರೆಯ ನಾದಿನಿಯನ್ನೂ ಸೃಜಿಸಿದ್ದಾರೆ. ದತ್ತುಪುತ್ರ ವೈಜ್ಞಾನಿಕವಾಗಿ ವಂಶವಾಹಿನಿಯ ವಾಹಕನಾಗಲಾರ ಮತ್ತು ಭಾವನಾತ್ಮಕವಾಗಿ ಬೆಸೆದುಕೊಳ್ಳದೆಯೂ ಇರಬಹುದು. ಆದ್ದರಿಂದ ಕಾರಂತರು ಈ ವಿಷಯದಲ್ಲಿ ಇನ್ನೊಂದು ಮದುವೆಗೆ ಮೊರೆ ಹೋಗುತ್ತಾರೆ.

ರಾಮ ಐತಾಳರು ಕೆಲವೊಮ್ಮೆ ಮನೆಯ ಹೆಣ್ಣು ಮಕ್ಕಳನ್ನು ಅಸಡ್ಡೆಯಿಂದ ಕಾಣುತ್ತಾರೆ. ಇದರಿಂದ ಬೇಸತ್ತ ಸರಸೋತಿ ಒಮ್ಮೆ ಮನೆ ಬಿಟ್ಟು ಹೋಗುತ್ತಾಳೆ. ಐತಾಳರು ಇನ್ನೊಂದು ಮದುವೆಯಾಗುವ ಉದ್ದೇಶವನ್ನಿಟ್ಟುಕೊಂಡು ಮನೆಯಲ್ಲಿ ತಂಗಿ ಮತ್ತು ಹೆಂಡತಿಗೆ ತಿಳಿಸದೆ ಹೋದಾಗ, ಮನೆಯಲ್ಲಿ ಚಪ್ಪರ, ಹಬ್ಬದ ಅಡುಗೆಯ ಸಿದ್ಧತೆ ಏಕೆಂದು ತಿಳಿಸದಿದ್ದಾಗ ಸರಸೋತಿ ಅನಾಥಶ್ರಮಕ್ಕೆ ಹೋಗಿ ನೆಲೆಯೂರುತ್ತಾಳೆ.

'ಅಯ್ಯೋ, ಈ ಅಣ್ಣನಿಗೆ ಮನೆಯ ಹೆಂಗಸರೆಂದರೆ ಕಸಕ್ಕೆ ಸಮ, ಈಗ ಕಳವನ್ನು ಬಳಿದು ಕನ್ನಡ ಮಾಡುವುದಕ್ಕೆ ನಾವು ಬೇಕು, ಯಾಕೆ, ಏನು ಎಂದು ಹೇಳುವುದಕ್ಕೆ ಮಾತ್ರ ಯಾರು ಬೇಡ' ಎಂಬ ಬೇಸರದ ಮಾತು ಸರಸೋತಿಯದು. ಹೀಗೆಂದು ಅನಾಥ ಆಶ್ರಮಕ್ಕೆ ಹೋಗಿ ನೆಲೆಯೂರುತ್ತಾಳೆ.

ಐತಾಳರ ಕ್ಷಮೆಯ ನಂತರವೇ ಮನೆಗೆ ಬರುತ್ತಾಳೆ. ಸ್ತ್ರೀಪುರುಷರ ಸಮಾನತೆಯ ಧೋರಣೆಯ ಮಾನವೀಕರಣವನ್ನು ಕಾರಂತರು ಇಂತಹ ಸಂದರ್ಭದಲ್ಲಿ ಮೆರೆಯುತ್ತಾರೆ. ಇದು ಕಥೆಯ ಓಟಕ್ಕೆ ಅನಿವಾರ್ಯತೆಯಾಗಿ ಬರೆಯುತ್ತಾರೆ. 'ಹೆಣ್ಣು ಮಕ್ಕಳಿಗೆ ಯಾವ ಮಣ್ಣಿಗೆ ಇಂಗ್ಲಿಷ್' ಎಂಬಂತಹ ಸ್ತ್ರೀಯನ್ನು ಶಿಕ್ಷಣದಲ್ಲಿ ಕಡೆಗಣಿಸುವ ಮಾತೂ ಬರುತ್ತದೆ. ಇವು ಅಂದಿನ ಜನ ನಂಬಿದ್ದ ನಂಬಿಕೆಗಳು ಎಂದಷ್ಟು ಹೇಳುವುದು ಕಾರಂತರ ಕೆಲಸ ಎಂದು ನಾವು ತಿಳಿಯಬಹುದು.

'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿ ಅನೇಕ ಕಡೆ ಮಾನವತಾವಾದದ ಲಕ್ಷಣಗಳು ಮರೆಯಾಗುತ್ತವೆ. ಸಂಪ್ರದಾಯದ ಅನುಕರಣೆ, ಜಾತಿ ಪದ್ಧತಿಯ ತತ್ವಪಾಲನೆ, ಲಿಂಗಭೇದ ಗುರುತಿಸುವಿಕೆ, ಬಡವ-ಬಲ್ಲಿದನೆಂಬ ಭಾವನೆ, ವರ್ಗಗಳ ನಿಯಮ ಬದ್ಧತೆ-ಮೊದಲಾದ ಅಂಶಗಳು ಕೃತಿಯಲ್ಲಿ ಸ್ಥಾನ ಪಡೆಯುವುದರಿಂದ ಅಮಾನವೀಕರಣದತ್ತ ಕೃತಿ ಸಾಗುತ್ತಿದೆಯೇನೋ ಎಂಬ ಅನುಮಾನ, ಓದುಗ ಅಥವಾ ವಿಮರ್ಶಕನಿಗೆ ಕಾಡುತ್ತದೆ. ಈ ಅಂಶಗಳ ನೆರವು ಕಾದಂಬರಿಯ ಘಟನಾವಳಿಗಳಿಗೆ ಅವಶ್ಯವಾಗಿಬೇಕಾಗುತ್ತದೆ. ಐತಾಳರು

ಮಗನನ್ನು ಶಾಲೆಗೆ ಸೇರಿಸಬೇಕಾದಂತಹ ಸಂದರ್ಭದಲ್ಲಿ ಅವರು ಸಂಪ್ರದಾಯ ನಿಷ್ಠವಾದ ವೇದಾಧ್ಯಯನ, ಪೌರೋಹಿತ್ಯಕ್ಕೆ ನೆರವಾಗಬಹುದಾದ ಮಂತ್ರಗಳ ಕಲಿಕೆಗೆ ಮಾನ್ಯತೆ ಕೊಡುತ್ತಾರೆ. ಆಧುನಿಕತೆಯ ಛಾಯೆ ಇಂಗ್ಲಿಷ್ ಮಾಧ್ಯಮ ಕಂಡರೂ ಅದನ್ನು ದೂರೀಕರಿಸುತ್ತಾರೆ. ಇದು ಅವರ ದೇಶಿಯ ಚಿಂತನೆಯ ನೆಲೆಗಟ್ಟಿಗೆ ಪೂರಕವಾದ ಅಂಶವಾಗಿದೆಯಾದರೂ ಸಂಪ್ರದಾಯಕ್ಕೆ ಶರಣು ಹೊಡೆಯುವುದು ಮಾನವತಾದದ ತತ್ತ್ವವಲ್ಲ. ಅದೇ ರೀತಿ ಶೀನಮಯ್ಯನು ಮಗ ನರಸಿಂಹನನ್ನು ಬೆಂಗಳೂರಿನ ಹೋಟೆಲ್‌ಗೆ ಕೆಲಸಕ್ಕೆ ಕಳುಹಿಸುತ್ತೇನೆಂದಾಗ 'ನಿನಗೆ ಮರಳು ಶೀನ! ಯಾವಾವ ಜಾತಿಯವರು ತಿಂದು ಬಿಟ್ಟ ಎಂಜಲನ್ನು ತೆಗೆಯಲಿಕ್ಕೆ ದೇವರು ನಮಗೆ ಬ್ರಾಹ್ಮಣ ಜನ್ಮಕೊಟ್ಟನೇನು ! ಹೇಳೋಯರಿಗೇನು ! ಅನ್ನವನ್ನು ಮಾರಿ ಹಣ ಸಂಪಾದಿಸಿದರೂ ಚಿಂತೆಯಿಲ್ಲ. ಒಟ್ಟಿನಿಂದ ಮನೆಗೆ ಉಪ್ಪರಿಗೆ ಜಿದ್ದರಾಯಿತು'-ಎಂಬ ಐತಾಳರ ಮಾತು ತೀರಾ ಜಾತೀಯತೆಯನ್ನು ಗುರುತಿಸುತ್ತದೆ, ನಂತರ ಅವರದೇ ಮುಂದುವರೆದ ಮಾತುಗಳಲ್ಲಿ 'ನಾನು ಚೇಷ್ಟೆಗೆ ಅಂದೆನಪ್ಪ. ನೀನು ಮಗನನ್ನು ಬೆಂಗಳೂರಿಗೆ ಕಳುಹಿಸು. ಇಲ್ಲವೆ ಮೈಸೂರಿಗೆ ಕಳುಹಿಸು, ಒಟ್ಟಾರೆ ಒಳ್ಳೆಯದಾಗಿ ಅವು ಬದುಕಿ ಇದ್ದರೆ ಸಾಕು.

ಈ ಕಾದಂಬರಿಯಲ್ಲಿನ ಸ್ತ್ರೀಯರು ಮಾನವೀಕರಣಕ್ಕೆ ತುಂಬ ನಿಕಟತೆಯಿಂದ ಕೆಲಸ ಮಾಡುತ್ತಾರೆ. ಸರಸೋತಿ, ಪಾರೋತಿ ಇಬ್ಬರು ಸಮವಯಸ್ಕರು, ಒಂದೇ ಸಂಸ್ಕೃತಿಯ ವಕ್ತಾರರು, ಸರಸೋತಿಗೆ ವೈಧವ್ಯ ಅಂಟಿಕೊಂಡಿದೆ. ಪಾರೋತಿಗೆ ಮುತ್ತೈದೆತನವಿದೆ. ಅಣ್ಣನ ಬಗ್ಗೆ ಕಾಳಜಿ ಇಟ್ಟುಕೊಂಡು ದುಡಿಯುತ್ತಿದ್ದ ಸರಸೋತಿ ತುಂಬ ನಿಷ್ಠುರ ವ್ಯಕ್ತಿತ್ವದವಳು. ರಾಮ ಐತಾಳರು ಇನ್ನೊಂದು ಮದುವೆಯಾಗಲು ನಿರ್ಧರಿಸಿ ಇವಳಿಗೆ ಹೇಳದೇ ಇದ್ದಾಗ ಸಿಟ್ಟುಗೊಂಡು ಮಂದಸ್ಥಿತಿಗೆ ಹೋಗಿದ್ದಳು. ಸರಸೋತಿ-ಪಾರೋತಿಯರು ಒಬ್ಬರನ್ನೊಬ್ಬರು ಸಂಪೂರ್ಣ ಅರ್ಥ ಮಾಡಿಕೊಂಡು ಬದುಕಿದರು-ಬಾಳಿದರು. ಐತಾಳರ ಎರಡನೇ ಹೆಂಡತಿಯಾಗಿ ಬಂದ ಸತ್ಯಭಾಮೆಯನ್ನು ಸವತಿಯಂತೆ, ಸೇವಕಿಯಂತೆ ಕಾಣದೆ ಅವಳೂ ಒಬ್ಬ ಹೆಣ್ಣು ಎಂದೇ ನಡೆಸಿಕೊಂಡರು, ಸತ್ಯಭಾಮೆ ಮಗ ಲಚ್ಚನಿಂದ ಮನಸ್ಸನ್ನು ತೀರಾ ಕುಗ್ಗಿಸಿಕೊಳ್ಳುತ್ತಾಳೆ. ಅವನ ಚಿಂತೆಯೇ ಅವಳಿಗೆ ಅವಸಾನವಾಗುತ್ತದೆ. ಲಚ್ಚನ ಹೆಂಡತಿಯಾಗಿ ಬಂದ ನಾಗವೇಣಿ ಮಾತ್ರ ಜಗತ್ತಿನ ಯಾವುದೇ ಹೆಣ್ಣು ಅನುಭವಿಸದಂತಹ ಕಷ್ಟಗಳನ್ನು ಅನುಭವಿಸುತ್ತಾಳೆ.

ಗಂಡನಿಲ್ಲದ ವೈಧವ್ಯ ಅನುಭವಿಸುವ ಸರಸೋತಿ ಒಂದೆಡೆಯಾದರೆ. ಗಂಡನಿದ್ದೂ ವೈಧವ್ಯ ಅನುಭವಿಸುವಂತಹ ಸ್ಥಿತಿ ನಾಗವೇಣಿಯದಾಗುತ್ತದೆ. ಕಷ್ಟ-ನಷ್ಟಗಳ ಬೇಗುದಿಯಲ್ಲಿ ಬೆಂದ ನಾಗವೇಣಿ ರಾಮನಂತ ಮಗುವಿಗೆ ಜನ್ಮವೀಯುತ್ತಾಳೆ. ಸರಸೋತಿ.

ನಾಗವೇಣಿಯರಂತಹ ಸುಸಂಸ್ಕೃತರ ನೆರಳಿನಲ್ಲಿ ಬೆಳೆದ ರಾಮ ಕುಲಕ್ಕೆ ಹೆಸರು ತರುವ ನಿಟ್ಟಿನಲ್ಲಿ ಸಾಗುತ್ತಾನೆ. ನಾಗವೇಣಿಗೆ ಅಕ್ಷರ ಸಂಸ್ಕೃತಿಯ ಅರಿವು ಇದ್ದಾಗ್ಯೂ ಅವನನ್ನು ನಂಬುತ್ತಾಳೆ. ಆದರೆ ಲಚ್ಚನೇ ಮೋಸ ಮಾಡುತ್ತಾನೆ. 'ನಾಗವೇಣಿಯಂತಹ ಪಾತ್ರ ಬದುಕಿನಲ್ಲೂ ಸಾಹಿತ್ಯದಲ್ಲೂ ದೊರೆಯುವುದು ವಿರಳ. ವಾಸ್ತವಿಕ ಲೋಕದಲ್ಲಿ ಶ್ರೀಕಾರಂತರು ಕಂಡಿರಬಹುದಾದ ಒಂದು ವ್ಯಕ್ತಿ ನಾಗವೇಣಿಯ ಪಾತ್ರ ರಚನೆಯಲ್ಲಿ ಆದರ್ಶೀಕೃತವಾಗಿ ಹೃತ್ಸೌಂದರ್ಯದಿಂದ ಬೆಳ್ಳಿಯಂತೆ ಬೆಳಗುತ್ತದೆ'

ರಾಮನ ಅತ್ತೆ, ಲಚ್ಚನ ತಂಗಿ ಸುಬ್ಬಮ್ಮ ಸಹ ಒಳ್ಳೆಯ ಮನಸ್ಸಿನವಳೇ ಆಗಿದ್ದಾಳೆ. ರಾಮನ ಆಶೋತ್ತರಗಳಿಗೆ ಸ್ಪಂದಿಸುವ ಸುಬ್ಬತ್ತೆ ಮಾನವೀಯ ಮೌಲ್ಯಗಳನ್ನು ಎತ್ತಿ ಹಿಡಿಯುತ್ತಾಳೆ.

ನಾಗವೇಣಿಗೊದಗಿದ ಕಷ್ಟದ ಸಂದರ್ಭದಲ್ಲಿ ಅವಳಿಗೆ ಕೈಲಾದ ಸಹಾಯ ಮಾಡಿದಳು. ಐರೋಡಿ ನಾರಾಯಣಯ್ಯ, ವಾಸುದೇವಯ್ಯ, ಕೃಷ್ಣೆ, ಮಾಧವ, ನೋವಾ ಮೊದಲಾದವರು ರಾಮನಿಗೆ ನೆರವಾಗಿ ತಮ್ಮ ಮನುಷ್ಯತ್ವವನ್ನು ಮೆರೆದಿದ್ದಾರೆ. ಈ ವರ್ಗಕ್ಕೆ ಪ್ರತಿಯಾಗಿ ಶೀನಮಯ್ಯ, ಒರಟ, ನರಸಿಂಹ, ಜಲಜಾ, ಲಲಿತೆ ಮೊದಲಾದವರು ಲಚ್ಚನಲ್ಲಿ ಅಮಾನುಷತೆಯನ್ನು ಬೆಳೆಸುತ್ತಾರೆ.

ಮಾನವೀಕರಣವನ್ನು ಸ್ಪಷ್ಟವಾಗಿ ನಿರ್ದಶಿಸುವ ಪಾತ್ರ ಸೂರ. ಐತಾಳರ ಗದ್ದೆಯ ಕೆಲಸ ಮಾಡುತ್ತಿದ್ದ ಸೂರನಿಗೆ ನಾಗವೇಣಿ ಗದ್ದೆ ಕೆಲಸದ ಕೊಚ್ಚನ್ನು ಕೊಡಲು ಎರಡು ಮೂರು ಬಾರಿ ಅವನ ಮನೆಗೆ ಹೋಗಿ ಹೇಳಿದರೂ ಬರಲಿಲ್ಲ. ನಾಗವೇಣಿ ಸೂರನ ಋಣದಲ್ಲಿರಬೇಕಾಗುತ್ತದೆ ಎಂಬ ಆತಂಕ. ಆದರೆ ಸೂರನಿಗೆ 'ಹಿಂದೆ ಆ ಅಮ್ಮ ಉಪ್ಪಿನಕಾಯಿ, ಮತ್ತೊಂದು ಮುಗದೊಂದನ್ನು ಕೊಟ್ಟು ನಮ್ಮನ್ನು ಸಾಕಿದರು. ಐತಾಳರು ಇರುವಾಗ. ಗೇಣಿ ಅಕ್ಕಿ ಆಗಲಿಲ್ಲ ಎಂದ ವರ್ಷ ಊರವರು ಅವರನ್ನು ಕಸಿವಿಸಿ ಜನ ಅಂದರೂ. ನನ್ನ ಮಟ್ಟಿಗೆ ಹೋಗಲಿ ಸೂರ. ದೇವರು ನಡೆಯಿಸಿದರೆ ಬರುವ ವರ್ಷಕೊಡು-ಎನ್ನುತ್ತಿದ್ದರು ಅಂಥವರ ಮನೆಗೆ ಬಡತನ ಬಂದಾಗ ಅವರ ಕೊಚ್ಚು ಕೊಟ್ಟರೂ ಈ ವರ್ಷ ಬೇಡ ನಮಗೆ ಅವರ ಕೊಚ್ಚು' ಎಂದಿದ್ದ. ಆದರೆ ನಾಗವೇಣಿ ಅಕ್ಕಿ ಮನೆಯಲ್ಲಿ ಇಲ್ಲವಾಗ ಕೇಳಿದರೆ ಎಲ್ಲಿಂದ ಕೊಡಬೇಕೆಂಬ ಚಿಂತೆ ಕಾಡುತ್ತಿತ್ತು.

ಸೂರನು ತನ್ನ ಮಾತನ್ನು ನಾಗವೇಣಿಗೆ ಹೇಳದೆ ಕೊಚ್ಚನ್ನು ಮರೆಸಿದ್ದನು. ನ್ಯಾಯಯುತವಾಗಿ ಬರಬೇಕಾದ ಕೊಚ್ಚನ್ನು ಕೊಡುತ್ತೇನೆಂದರೂ ಪಡೆಯಲಾರದ

ಸಂಬಂಧಿಕನಲ್ಲದ ಸೂರ ಒಂದೆಡೆಯಾದರೆ, ದುಡಿಯಲಾರದೆ ಅನ್ಯಾಯವಾಗಿ ಇದ್ದ ಹಣ-ಬಳೆ-ಆಸ್ತಿಯನ್ನು ಕಸಿಯುವ ಸಪ್ತಪದಿ ತುಳಿದ ಗಂಡ ಲಚ್ಚ ಇನ್ನೊಂದೆಡೆ, ಸೂರ ಮಾನವೀಯತೆ ಮೆರೆದರೆ, ಲಚ್ಚ ಅಮಾನವೀಯತೆ ಮೆರೆಯುತ್ತಾನೆ.

ಕಾರಂತರು 'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿ ಮಾನವೀಕರಣದ ನಿರ್ವಚನವನ್ನು ಆಂಶಿಕವಾಗಿ ಅಲ್ಲಲ್ಲಿ ಹೇಳದೆ, ಇಡೀ ಕೃತಿಯನ್ನೇ ಮಾನವೀಕರಣಕ್ಕೆ ಅರ್ಪಿಸಿದ್ದಾರೆ. ಪಾರೋತಿ ರಾಮ ಐತಾಳರ ಜೀವನ ಕ್ರಮದಿಂದಲೇ ಆರಂಭವಾಗುವ ಮಾನವೀಕರಣ ಸರಸೋತಿ-ಸತ್ಯಭಾಮೆ, ಸುಬ್ಬಮ್ಮ, ನಾಗವೇಣಿ, ಸೂರ ವಾಸುದೇವಯ್ಯ, ನಾರಾಯಣಯ್ಯ, ಕೃಷ್ಣವೇಣಿ, ಮಾಧವ, ರಾಮನ ಮೂಲಕ ಹಾದು ಕೃತಿಯುದ್ದಕ್ಕೂ ಹೆಪ್ಪುಗಟ್ಟಿ ನಿಲ್ಲುತ್ತದೆ.

ಪಾರೋತಿ-ರಾಮ ಐತಾಳರ ಮದುವೆಯಿಂದ ಆರಂಭಗೊಂಡ ಕೃತಿ ಮತ್ತೆ ಮೊಮ್ಮಗ ರಾಮ-ಸರಸ್ವತಿಯರ ಮದುವೆ ನಿಶ್ಚಯಕ್ಕೆ ಬಂದು ನಿಲ್ಲುತ್ತದೆ, ಇದೊಂದು ವರ್ತುಲವಾಗಿ ಸಾಗುವ, ಒಂದೇ ಮನೆತನದ ತಲೆಮಾರುಗಳ ಅವರ್ತನ ಕ್ರಮವನ್ನು ನಿರೂಪಿಸುವ ಕಾದಂಬರಿಯಾಗಿದೆ.

ಆಧುನಿಕ ಪೂರ್ವ ಚಿತ್ರಣ ಅಂದರೆ ಆಂಗ್ಲ ಮಾಧ್ಯಮ ನಮ್ಮಲ್ಲಿಗೆ ಕಾಲಿರಿಸುವ ಮೊದಲು ಇದ್ದ ಪರಿಸ್ಥಿತಿ ಹಾಗೂ ನಂತರದ ಪರಿಸ್ಥಿತಿ ಎರಡನ್ನೂ ಅರುಹುವ ಕಾದಂಬರಿ ಹೊಸ ಜೀವನದ ಹೊಸ ನೀತಿಯನ್ನು ಪರಿಚಯಿಸುತ್ತದೆ.

ಭಾರತೀಯ ಸಂಸ್ಕೃತಿಯಲ್ಲಿ ಕುಟುಂಬ ವ್ಯವಸ್ಥೆಗೆ ಪ್ರಾಧಾನ್ಯ ಹೆಚ್ಚು. ಆದ್ದರಿಂದ ಆದಿ ಮಾನವನ ಮುಕ್ತ ಲೈಂಗಿಕ ಪ್ರವೃತ್ತಿಯಲ್ಲಿ ಕ್ರಮೇಣ ಮುಚ್ಚುಮರೆ, ಲಜ್ಜೆ ಸಂಕೋಚಗಳು ಬೆಳೆಯುತ್ತ ಬಂದು ಗಂಡು ಹೆಣ್ಣಿನ ಲೈಂಗಿಕ ಸಂಬಂಧಕ್ಕೆ ವಿವಾಹದಂತ ವಿಧಿವಿಧಾನಗಳ ಮುದ್ರೆ ಒತ್ತಿ ಅವುಗಳನ್ನು ಸಾಮಾಜಿಕ ಕಟ್ಟುಪಾಡುಗಳಿಗೆ ಸೀಮಿತಗೊಳಿಸಲಾಯಿತು. ಈ ನಡುವೆ ಮಾನವನ ಮೂಲ ಪ್ರವೃತ್ತಿಯಲ್ಲಿ ಶಕ್ತಿಶಾಲಿ ಎನಿಸುವ 'ಕಾಮ' ಹಾಗೂ ಲೈಂಗಿಕ ಪ್ರಚೋದನೆ ಇವು ಸಾಮಾಜಿಕ ನಿರ್ಬಂಧಗಳನ್ನು ಬಿಡುವ ಸಂದರ್ಭಗಳ ಹಿಂದಿನ 'ಅನೈತಿಕ' ವೆಂದು ಕರೆದರೂ ಅದು ಅನಿವಾರ್ಯವಾಗಿ ಬಿಡುವ ಸಂದರ್ಭಗಳ ಹಿಂದಿನ ಕಾರ್ಯ-ಕಾರಣ ನಿಲುವು ಮಹತ್ವವೆನಿಸುತ್ತದೆ. 'ಅದು ಮಿಟ್ಟ ಭಾವನೆಗಳ ಸ್ಫೋಟ'ವೇ ಇದರ ಶಕ್ತಿ ಚಾಲನೆ ಎಂದು ಮನಃಶಾಸ್ತ್ರಜ್ಞರು ಹೇಳುತ್ತಾರೆ.

'ಮರಳಿ ಮಣ್ಣಿಗೆ' ಯ ರಾಮ ಐತಾಳರು ಎರಡನೆಯ ಮದುವೆಗೆ ಸಿದ್ಧರಾದಾಗ ಅವರ ಪತ್ನಿ, ಮಕ್ಕಳಿಲ್ಲದ ಪಾರೋತಿ ಐತಾಳರ ವರ್ತನೆಯನ್ನು 'ಅದು ಸಾಮಾನ್ಯ'ವೆಂಬಂತೆ

ಸ್ವೀಕರಿಸಿದಳೇನೋ ನಿಜ, ಆದರೆ ಮನಸ್ಥಿತಿ ಮಾತ್ರ ಪ್ರಕ್ಷುಬ್ಧ ಜಲದಂತೆ ಇತ್ತು. 'ಗಂಡನ ಪ್ರೀತಿ ನನ್ನಿಂದ ತೇಲಿ ಅವಳನ್ನೇ ಆಶ್ರಯಿಸದೇನು?' ಎಂಬ ಚಿಂತೆ ಒಂದು ಕ್ಷಣ ಅವಳನ್ನು ಕಾಡುತ್ತದೆ. ತನ್ನ ಸವತಿಯ ಮಗುವಿಗೆ ತನ್ನ ರಕ್ತ ಬಾಂಧವ್ಯ ಹೇಗೆ ಉಂಟಾದೀತು, ಎಂಬ ತರ್ಕದಿಂದ ಅವಳ ಕಣ್ಣು ಮಂಜಾಗುತ್ತದೆ, ಮರುಗಳಿಗೆಯಲ್ಲಿ ಅವಳು ತನ್ನನ್ನು ತಾನು ಸಾವರಿಸಿಕೊಳ್ಳುವ ರೀತಿಯಲ್ಲಿ ಲೈಂಗಿಕ ಸಂಬಂಧವನ್ನು ಮೀರಿ ನಿಲ್ಲುವ 'ಸ್ಥಿತಪ್ರಜ್ಞತೆ' ಕಾಣುತ್ತದೆ.

'ಪಾರೋತಿಯ ದುಃಖಭಾರ ಕಡಿಮೆಯಾದೊಡನೆ ಅವಳಿಗೂ ಅನಿಸಿತು, ತಾನು ಮನೆಯವಳಾಗಿದ್ದು, ಆ ದಿನ ಮರೆಯಲ್ಲಿ ಇದ್ದರೆ-ಈ ಲಗ್ನ ಪಾರೋತಿಯ ಮನಸ್ಸಿಗೆ ಬಂದು ನಡೆದಿಲ್ಲ ಎಂಬ ಊಹೆ ಊರಿಗೆ ಹರಡೀತೆಂದು, ಹಾಗಾಗ ಕೂಡದೆಂದು ತನಗೆ ಉಕ್ಕಿ ಬರುತ್ತಿದ್ದ ದುಃಖವನ್ನು ಹದ್ದುಬಸ್ತಿಗೆ ತಂದುಕೊಂಡು ಅಡುಗೆ ಚಪ್ಪರಕ್ಕೆ ಹೋದಳು'.

ಕಾರಂತರ ಕಾದಂಬರಿಯಲ್ಲಿ 'ಪ್ರಕೃತಿಯ ಸೌಂದರ್ಯ'ವನ್ನು ವೀಕ್ಷಿಸುವಾಗ ಸ್ತ್ರೀಯ ಚಿತ್ರ ಕಣ್ಣ ಮುಂದೆ ಸುಳಿಯುತ್ತದೆ. ಭೂಮಿ, ನೀರು, ಅಗ್ನಿ, ಆಕಾಶ ಮತ್ತು ವಾಯು-ಈ ಪಂಚಮಹಾಭೂತಗಳಿಂದ ಮಾನವ ಶರೀರ ನಿರ್ಮಿತವಾಗಿದ್ದರೆ, ಈ ಪ್ರಕೃತಿ ತತ್ವದ ವಿಶೇಷತೆಗೆ 'ಸ್ತ್ರೀ' ಒಂದು ಉದಾ: ಪೃಥ್ವಿಯ ಸಹನಶೀಲತೆ, ಸಾಗರದ ಗಾಂಭೀರ್ಯ ಮತ್ತು ತರಂಗಾಕುಲತೆ, ಅಗ್ನಿಯ ತೇಜಸ್ಸು, ಗಗನದ ವೈಶಾಲ್ಯ, ಗಾಳಿಯ ಚಂಚಲತೆ-ಇವೆಲ್ಲ ಮೈಗೂಡಿಕೊಂಡ ಹೆಣ್ಣನ್ನು ನನ್ನ ಬರವಣಿಗೆಯಲ್ಲಿ ನಾನು ದೇವಿಯೆಂದು ಪರಿಭಾವಿಸಿಲ್ಲ' ಎನ್ನುವ ಹಿಂದೀ ಲೇಖಕ ಗೋವಿಂದ ಮಿಶ್ರಾ, ಅವರ ಸಹನಶೀಲತೆಯೊಂದಿಗೆ ಪ್ರಕಟವಾಗುವ ಪ್ರತಿಭಟನೆ, ಅಸ್ತಿತ್ವಕ್ಕಾಗಿ ನಡೆಸುವ ಹೋರಾಟ-ಇವು ಕೂಡ ನನಗೆ ಸುಸಂಬದ್ಧವಾಗಿ ಕಾಣುತ್ತವೆ ಎನ್ನುತ್ತಾರೆ. ಸ್ತ್ರೀಯರ ಅಂತರ್ಯದಲ್ಲಿ ಸುಪ್ತವಾಗಿರುವ ಇಂಥದೊಂದು ಚೇತನವು ಕಾಲಕಾಲಕ್ಕೆ ಸ್ಫೋಟಗೊಳ್ಳುವ ಕಾರಣಗಳ ಹಿನ್ನೆಲೆಯಲ್ಲಿ ಅವರು, ಶತಮಾನಗಳಿಂದ ಅದು ಮಿಕ್ಕ ಆಂತರಿಕ ಹಾಗೂ ಬಾಹ್ಯ ಒತ್ತಡಗಳ ಸಂಘರ್ಷವನ್ನು ಗುರುತಿಸುತ್ತಾರೆ.

ಈ ಪ್ರವಾಹ ಏಕಮುಖವಲ್ಲ, ಕೆಲವೊಮ್ಮೆ ಇದು ಪುರುಷ ವಿರೋಧಿಯಂತೆ ಮತ್ತೊಮ್ಮೆ ಸಮಾಜದ ಎದುರಾಳಿಯಂತೆ, ಇನ್ನು ಕೆಲವು ಬಾರಿ ತನ್ನನ್ನೇ ನಿರಾಕರಿಸಿಕೊಳ್ಳುವ ವಿಷಮತೆಯಲ್ಲಿ ರೂಪುಗೊಳ್ಳಬಹುದು. ಯಾವುದೇ ನಿಲುವು, ತಕ್ಕ ಸಮರ್ಥನೆಯನ್ನು ಒಳಗೊಂಡಾಗಲೇ ಅದು 'ವೈಚಾರಿಕತೆ' ಎನಿಸುವುದು.

ಐತಾಳರು ಮರು ಮದುವೆಯಾಗುವ ಸುದ್ದಿಯನ್ನು ತಿಳಿಸದೆ ಇದ್ದುದು ಮನೆಯ ಹೆಣ್ಣು ಮಕ್ಕಳನ್ನು ತಾತ್ಸಾರ ಮಾಡಲೆಂದೇ ಎಂಬ ಅವಮಾನಕ್ಕೆ ತಕ್ಕಾಗಿ ಔಡನೂ ಕಚ್ಚಿ ದುಃಖ

ಉದ್ವೇಗಗಳಿಂದ ನನಗೆ ಯಾರ ಹಂಗೂ ಇಲ್ಲ. ಅಪ್ಪಯ್ಯ ನನ್ನನ್ನು ಧಾರೆ ಎರೆದ ಗಳಿಗೆಗೇನೇ ನನಗೆ ಈ ಮನೆಯ ಋಣ ಕಡಿದಿತ್ತು.

ಅಣ್ಣ ಎಂದು ನಂಬಿ ನಾನು ಇಲ್ಲಿಗೆ ಬಂದೆ. ಅವನ ಕೂಳಿಗಾಗಿ ಬಂದು ಬೀಳಲಿಲ್ಲ. ಮಕ್ಕಳು ಇಲ್ಲ, ಮರಿಯಿಲ್ಲ, ಬರಿದೆ ಅಲ್ಲಿ ಯಾಕೆ ಬಿದ್ದಿರುವುದು ? ಇವನೆಷ್ಟಾದರೂ ಅಣ್ಣ, ಒಂದೇ ಕರುಳಿನ ಚೂರು-ಎಂದು ನಂಬಿಕೊಂಡು ಬಂದರೆ ಇವನಿಗೆ ನಾನು ತಾತ್ಸಾರವಾದೆ. ಮನೆಯ ನಾಯಿ ಹಾಗೆ ದುಡಿಯಬೇಕು ನಾವು' ಎಂದು ಸಿಟ್ಟುಗೊಳ್ಳುತ್ತಾಳೆ. ಚಪ್ಪರ ಯಾಕೆ ಎಂದು ಕೇಳಬೇಕಾದರೆ ಯಾರಾದರೂ ಒಕ್ಕಲು ಮನೆಗೋ, ನೆರೆಮನೆಗೆ ಹೋಗಿ ಕೇಳಬೇಕು. ಅಲ್ಲವೇ ? ಎನ್ನುತ್ತಾ ಐತಾಳರ ವರ್ತನೆಯನ್ನು ಖಂಡಿಸುತ್ತಾಳೆ. ಆ ಮನೆಯನ್ನೆ ಬಿಟ್ಟು ಹೋಗುತ್ತಾಳೆ. ಆ ಕ್ಷಣದಲ್ಲಿ ಅವಳಿಗೆ ಸ್ವಾಭಿಮಾನ ಹಿರಿದಾಗಿ ಕಂಡಿತ್ತು, ವಿಚಾರ ಶೂನ್ಯವೆನಿಸುವ ಯಾವ ಪಾತ್ರವೂ ತನ್ನ ಸಹನೆಯ ಓಘದೊಂದಿಗೆ ಬೆರೆತುಕೊಳ್ಳಲಾರದೆಂಬುದು ಕಾರಂತರು ಕಂಡುಕೊಂಡ ಸತ್ಯ.

'ಪುರುಷನಿಂದ ಆಳಲ್ಪಟ್ಟರೂ ಸ್ತ್ರೀಯು ಮಾನಸಿಕವಾಗಿ ಅಬಲೆಯಲ್ಲ', ಒಂದು ಮಿತಿಯೊಳಗೆ ಸುತ್ತುವಾಗಲೂ ಅವಳ ಬೌದ್ಧಿಕ ಚೇತನ ಸುಮ್ಮನಿರಲಾರದು, ಇದೊಂದು ಬಗೆಯ ಕ್ರಾಂತಿಯಂದು ತಿಳಿಯದ ಸೌಮ್ಯ ವಾತಾವರಣದಲ್ಲಿ ತನ್ನ ಅನಿಸಿಕೆಗಳನ್ನು ಅವಳು ನಿಷ್ಠುರವಾಗಿ ಹರಡಿ ಬಿಡುತ್ತಾಳೆ. ಕುಟುಂಬದ ಭದ್ರತೆಗೆ ಇದು ಪೂರಕ ಹಾಗೂ ಅವಶ್ಯವೆಂದು ತಿಳಿದುಕೊಳ್ಳುವುದರಿಂದ, ನಿರ್ಭೀತಿಯ ಸ್ತರದಲ್ಲೇ ಅವಳು ಮಾತನಾಡುತ್ತಾಳೆ. ಹೊಣೆಗೇಡಿತನಕ್ಕೆ ಕಿಡಿಕಿಡಿಯಾಗುತ್ತಾಳೆ. ದುಃಖದ ದಿನಗಳು ಬಂದವೆಂದರೆ ಕಂಗಾಲಾಗುವ ಭೀರುತನ ಸರಸೋತಿಯದಲ್ಲ. ಲಚ್ಚ ಸಾಲದ ಹೊರೆಯನ್ನು ಹೆಚ್ಚಿಸಿಕೊಂಡಿದ್ದಾನೆ. ಅವನಿಂದ ಪತ್ರವೂ ಇಲ್ಲ. ಈ ಪರಿಸ್ಥಿತಿಯಲ್ಲಿ ಸಾಗುವಳಿ ಮಾಡದಿದ್ದರೆ ಕೂಳಿಗೆ ಗತಿ ಇರದು. ಕೋಡಿಯ ಮನೆಯಲ್ಲಿ ಮೂವರು ಅನಾಥೆಯರು ಕುಳಿತು, 'ಮಳೆಯ ಹನಿಗಳನ್ನು ಲೆಕ್ಕ ಮಾಡಬೇಕೆ ? ಏನಾದರೂ ಸ್ವಲ್ಪವಾದರೂ ಸಾಗುವಳಿ ಮಾಡಬಾರದೇ' ಎಂಬ ಯೋಚನೆ ಮಾಡುತ್ತಿದ್ದಾರೆ. ಸರಸೋತಿಯಂತು 'ನನ್ನಿಂದಾದ ಒದ್ದಾಟ ಮಾಡುತ್ತೇನೆ' ಎನ್ನುತ್ತಾಳೆ 'ಮನೆಯಲ್ಲಿ ಕೂತು ತಿನ್ನುವುದೇನು ಚಂದ' ಎಂಬ ಸರಸೋತಿಯ ನುಡಿಯನ್ನು ನಾಗವೇಣಿಯೂ ಒಪ್ಪಿಕೊಳ್ಳುತ್ತಾಳೆ.

ನಾಗವೇಣಿ ವಿದ್ಯಾವಂತೆ. ಕೋಡಿಯ ಮುದುಕಿಯರ ಸ್ಥಿತಿಯನ್ನು ಚೆನ್ನಾಗಿ ಅರಿತುಕೊಂಡವಳು. ತನ್ನೊಬ್ಬಳ ಸುಖವನ್ನು ಬಯಸಿ ತಂದೆಯ ಮನೆಗೆ ಹೋಗುವುದೇ ಅವಳು ತಂದೆಗೆ ಹೇಳುತ್ತಾಳೆ. 'ಹೌದು, ನಾನು ನಿಮ್ಮ ಮನೆಗೆ ಬರಬೇಕು ಅನ್ನುತ್ತೀರಿ. ಆದರೆ ಅವರಿಗೆ

ಯಾರಿದ್ದಾರೆ ? ಈ ವಯಸ್ಸಿನಲ್ಲಿ ? ಅವರಿಬ್ಬರು ಬೇರೆಯವರ ಋಣಕ್ಕೆ ಬಿದ್ದರೇನು'? ಎಂದು ವಾತಾವರಣವನ್ನು ತಿಳಿಗೊಳಿಸುತ್ತಾಳೆ, 'ಸಾವು ಎಲ್ಲರಿಗೂ ಒಂದೇ', ಹುಲ್ಲು ತಿಂದು ಸಾಯಲಿಕ್ಕಿಲ್ಲ ಮನುಷ್ಯ ಎಂದು ತನ್ನ ಅಳುವನ್ನು ನುಂಗಿಕೊಂಡು ಧೈರ್ಯದ ಮಾತನಾಡುತ್ತಾಳೆ.

'ಮರಳಿ ಮಣ್ಣಿಗೆ' ಕಾದಂಬರಿಯ ಪ್ರಧಾನ ಪಾತ್ರಗಳಲ್ಲಿ ಪಾರೋತಿ ತೀರ ದುರ್ಬಲ ವ್ಯಕ್ತಿ, ಆದರೂ ತನ್ನ ಗಂಡನ ಎರಡನೆಯ ಮದುವೆಯ ಸಂದರ್ಭದಲ್ಲಿ ಅವಳು ತನ್ನನ್ನು ತಾನು ಸಾವರಿಸಿಕೊಳ್ಳುವ ದೃಶ್ಯ ಅನುಪಮವಾದುದು.

ಅವಳ ಕಣ್ಣಾಲಿಗಳು ತೊಯ್ದು ಮಬ್ಬುಗಟ್ಟಿದೆ, ಒತ್ತರಿಸಿ ಬರುವ ದುಃಖವನ್ನು ತಡೆದುಕೊಂಡು ಅವಳು ಯೋಚಿಸುತ್ತಾಳೆ, ಅವಳಿಗೆ ಹೀಗನ್ನಿಸುತ್ತಿದೆ. ತಾನು ಮನೆಯವಳಾಗಿದ್ದು, ಆ ದಿನ ಮನೆಯಲ್ಲೇ ಇದ್ದರೆ.. ಈ ಲಗ್ನ ಪಾರೋತಿಯ ಮನಸ್ಸಿಗೆ ಬಂದು ನಡೆದಿಲ್ಲ ಎಂಬ ಊಹೆ ಊರಿಗೆ ಹರಡೀತೆಂದು, ಹಾಗಾಗ ಕೂಡದೆಂದು ತನಗೆ ಉಕ್ಕಿ ಬರುತ್ತಿದ್ದ ದುಃಖವನ್ನು ಹದ್ದಿಬಸ್ತಿಗೆ ತಂದುಕೊಂಡು, ಅಡುಗೆ ಚಪ್ಪರಕ್ಕೆ ಹೋದಳು. ಆ ಹೊಣೆಯಲ್ಲಿ ಕೆಮ್ಮುತ್ತ ಹಪ್ಪಳ ಕರಿಯುವುದರಲ್ಲಿ ಸಹಾಯ ಮಾಡುತ್ತಿದ್ದ ಸರಸೋತಿಯನ್ನು ತಾನೂ ಕೂಡಿಕೊಂಡಳು.. ಅಲ್ಲಿಂದ ಆಕೆಯು ಬಲು ಹರ್ಷಭರಿತಳಾಗಿರುವ ಮುಖ ಹಾಕಿಕೊಂಡು ಚಪ್ಪರದಲ್ಲಿ ನಾಲ್ಕಾರು ಬಾರಿ ಅತ್ತಿತ್ತ ತಿರುಗಿದಳು. ನೆರೆಕರೆಯ ಜನರೊಡನೆ ಮಾತುಕತೆ ನಡೆಸಿದಳು'

ಘಟನೆಗಳ ಮುಖಾಂತರ ಪಾತ್ರಗಳನ್ನು ಅನುಭವಕ್ಕೆ ತರುವ ಅವುಗಳ ಸ್ವಭಾವವನ್ನು ಪರಿಚಯಿಸುವ ಇಂಥದೊಂದು ಕಲೆ ಕಾರಂತರಿಗೆ ಕರಗತವಾಗಿದೆಯೆನ್ನಬೇಕು, ಸರಸೋತಿ ಎಂಥ ದುರ್ಭರ ಸ್ಥಿತಿಯಲ್ಲಿಯೂ ಬದುಕನ್ನು ಅಪ್ಪಿಕೊಳ್ಳುತ್ತಾಳೆ, ನಾಗವೇಣಿ, ಈ ಇಬ್ಬರ ನಡುವೆ ಬಾಳಿದವಳಾದ್ದರಿಂದ ಅವಳಲ್ಲಿ ಹೋರಾಟ ನಡೆಸುವ ಛಲವಿದೆ. ಮೇಲಾಗಿ ವಿದ್ಯೆ-ವಿಚಾರ ಶಕ್ತಿಯನ್ನು ನೀಡಿದೆ, ಬದುಕನ್ನು ಕೊನೆಗಾಣಿಸಿದರೆ ಹೇಗೆ-ಎಂಬ ನಿರ್ಧಾರ ಗಟ್ಟಿಗೊಳ್ಳದಿರುವ ಕಾರಣದಲ್ಲಿ ಮನೆಯ ಮುದುಕಿಯರ ದೃಢ ಸಂಕಲ್ಪ, ಹಾಗೂ ಮಗುವಿನ ಭವಿಷ್ಯವೂ ಸೇರಿಕೊಂಡು, ಮತ್ತೆ ಪ್ರಕೃತಿಯ ಮಡಿಲನ್ನು ಆಕೆ ಸೇರಿಕೊಳ್ಳುತ್ತಾಳೆ.

ಪಿಟೀಲು ಅವಳ ಸಂಗಾತಿಯಾಗುತ್ತದೆ. ಅದರ ವಿವಿಧ ಲಯದಲ್ಲಿ ಅವಳ ಜೀವನ ಸಂಗೀತ ಮಿಡಿಯುತ್ತದೆ. ವಿಚಾರವು ಹೀಗೆ ಒಂದೊಂದು ಹಂತದಲ್ಲಿ ಬೆಳೆಯುತ್ತ ಕೊನೆಗೂ ತ್ಯಾಗದಲ್ಲಿ ಪರ್ಯವಸಾನಗೊಳ್ಳುವ ರೀತಿ ವಿಸ್ಮಯ ಹುಟ್ಟಿಸುತ್ತದೆ. ಲಜ್ಜನಿಂದ ಅವಳ ಜೀವನಾನುಭವ ಜಟಿಲವಾಗುತ್ತದೆ. ದುಃಖದಾಯಕವೂ ಆಗುತ್ತದೆ. ಆದರೆ ಅವಳ ಧೈರ್ಯ. ಶ್ರದ್ಧೆಗಳಿಂದಾಗಿ ಈ ಅನುಭವ ವಿಲಕ್ಷಣವಾದ ಅರ್ಥವನ್ನು ತಡೆಯುತ್ತದೆ. ಅವಳ ವ್ಯಕ್ತಿತ್ವ,

ಸಾಧನೆ, ಉಳಿದವರಿಗೆ ಸ್ಫೂರ್ತಿದಾಯಕವಾಗುತ್ತವೆ. ಸಮಾಜದ ಒಂದು ಸಂಕ್ರಮಣದ ಅವಸ್ಥೆಯ ಸೆಳವಿನಲ್ಲಿ ಸಿಕ್ಕರೂ ಧೃತಿಗೆಡದೆ ದಡವನ್ನು ತಲುಪುವ ನಾಗವೇಣಿಯ ಸಾಹಸ, ಅವಳಿಗೆ ಕೃತಾರ್ಥತೆಯನ್ನು ತಂದುಕೊಡುತ್ತದೆ, ಒಂದಕ್ಕೊಂದು ಕೊಂಡಿ ಬೆಸೆಯುತ್ತ ಹೋಗುವ ಮಾನವ ಸಂಬಂಧಗಳು ಮಾನಸಿಕ ಸ್ತರದಲ್ಲಿ ಸಾಮ್ಯ ಪಡೆದುಕೊಂಡು ತಮ್ಮ ತಮ್ಮ ಬೆಳಕಿನಲ್ಲಿ ಸಾಗುವ ರೀತಿಯೂ ಅಪೂರ್ವವೆನಿಸುತ್ತದೆ.

ಅತಿ ಸಹನಶೀಲತೆಯ ಈ ಹೆಣ್ಣು ಮಕ್ಕಳು ಈ ಕಾಲಕ್ಕೆ ಸಲ್ಲುವವರೇ ? ಕಾದಂಬರಿ ನೀಡುವ ಸಮಾಜದರ್ಶನವು ಕೇವಲ ಒಂದು ವರ್ಗಕ್ಕಷ್ಟೇ ಸೀಮಿತವೆನಿಸಿ ಉಳಿದ ಮಗ್ಗಲುಗಳು ನಿರ್ಲಕ್ಷ್ಯಗೊಂಡಿಲ್ಲವೇ ? ಎಂಬ ಪ್ರಶ್ನೆ ಹುಟ್ಟುವುದು ಅಸಂಭವವೇನಿಲ್ಲ, ಕಾರಂತರು ತಾನು ಕಂಡ ಸಮಾಜದ ಚಿತ್ರಣವನ್ನು ಯಾವುದೇ ಕೃತಕತೆಯನ್ನು ತಂದೊಡ್ಡದೆ ನೀಡುವ ಪ್ರಯತ್ನ ಮಾಡಿದ್ದಾರೆ ನಿಜ, ಇದು ಪ್ರಾದೇಶಿಕತೆಯನ್ನು ದುರ್ಲಕ್ಷಿಸದೆ ಕೈಗೊಂಡ ಒಂದು ಕಲಾತ್ಮಕ ಸಾಧನೆ, ಆದರೆ ಅತಿ ಒಳ್ಳೆಯತನ ತಂದೊಡ್ಡುವ ಅಪಾಯಗಳಿಂದ ಪಾತ್ರಗಳು ತಮ್ಮ ವ್ಯಕ್ತಿತ್ವಗಳನ್ನು ರಕ್ಷಿಸಿಕೊಳ್ಳಲೆಂದೇ ವಿಧಿ, ಹಣೆಯ ಬರಹ, ಅದೃಷ್ಟ, ದೇವರು, ಇಂಥವುಗಳಿಗೆ ಅನಿವಾರ್ಯವಾಗಿ ಶರಣು ಹೋಗುವ ಸಂದರ್ಭಗಳನ್ನು ಲೇಖಕ, ತಳಕು ಹಾಕುವ ಪ್ರಯತ್ನ ನಡೆಸಬೇಕಾಯಿತಲ್ಲವೇ ? ಎಂದು ಅನಿಸಿದೆ ಮತ್ತು ಅವರವರ ನಂಬಿಕೆಗಳನ್ನು ಅವರವರ ಬದುಕಿನೊಂದಿಗೆ ಸಮೀಕರಿಸಿಕೊಂಡೇ, ಉದ್ದಕ್ಕೂ ವಯಸ್ಸು ಬೆಳೆದರೂ ವ್ಯಕ್ತಿತ್ವದಲ್ಲಿಯ ಕುಬ್ಜತೆ ಹಾಗೆಯೇ ಉಳಿದುಕೊಳ್ಳುತ್ತದೆ.

ಸುಧಾರಣೆಯ ಗಾಳಿಯಲ್ಲಿ ಉಸಿರಾಡ ತೊಡಗಿದ ನಾಗವೇಣಿಯೂ, ಮಗನ ಗಾಂಧೀವಾದವನ್ನು ಒಪ್ಪದ ಸ್ಥಿತಿಯಲ್ಲಿದ್ದಾಳೆ. 'ಮಗು, ಏನು ಗಾಂಧಿಯೋ ಏನು ಸ್ವರಾಜ್ಯವೋ ನಿನ್ನ ಅಜ್ಜರಾಮ ಐತಾಳರು ಜನಿವಾರಕ್ಕೆ ನೂಲು ನೂತು ಮಗನ ಕೈಯಿಂದಲೂ ಸ್ವರಾಜ್ಯ ಪಡೆಯದೆ ಸತ್ತರು ಎಂದು ತನ್ನ ಮಗ, ರಾಮನಿಗೆ ಹೇಳುತ್ತಾಳೆ. ವ್ಯವಸ್ಥೆಯ ಬಗೆಗಿನ ನಿರಾಶೆಯಿಂದಾಗಿ ಇಂಥ ಅಳಲು ಹೊಮ್ಮಿದೆ ಎನ್ನುವುದಕ್ಕಿಂತಲೂ ಮಗ, ಎಲ್ಲಿ ಕೈತಪ್ಪಿ ಹೋಗುತ್ತಾನೋ ಎಂಬ ಮಾತೃ ಮನಸ್ಸಿನ ಕಳವಳ ಇದೆಂದು ಅರ್ಥೈಸಿಕೊಳ್ಳುವಾಗಲೂ ನಾಗವೇಣಿ, ಸರಸೋತಿಯ ವಾರಸುದಾರಿಕೆಯನ್ನು ಉಳಿಸಿಕೊಂಡವಳಂತೆಯೇ ಕಾಣುತ್ತಾಳೆ. ಮೂರನೆಯ ತಲೆಮಾರಿಗೂ ಅದೇ ಸಹನೆ, ಅದೇ ಸಂಯಮ ನಾಗವೇಣಿಯ ಸಂಯಮಶೀಲತೆಯ ಸಾಧ್ಯತೆಗಳು ಇಂದಿಗೂ ಚರ್ಚೆಗೊಳ್ಳುತ್ತಿವೆ. ಇಂಥ ಉದಾತ್ತೀಕರಣದಿಂದ ಪುರುಷ ಪಾತ್ರಗಳು ಉಪೇಕ್ಷೆಗೊಂಡಿವೆ. ಅವುಗಳಿಗೆ ಅಸ್ತಿತ್ವವಿಲ್ಲದಂತಾಗಿದೆ ಎಂಬ ವಾದವೂ

ಉಂಟು. ಆದರೆ ಇವು ಎಂಥ ಪುರುಷ ವರ್ಗ ಶತಮಾನಗಳಿಂದ ಹೆಣ್ಣನ್ನು ಕೇವಲ ಮಕ್ಕಳನ್ನೂ ಹಡೆಯುವ ಯಂತ್ರವಾಗಿ ಕಂಡು ಅವಳ ವಿಚಾರಗಳಿಗೆ ಕಿವುಡಾಗಿ ಅಸಮತೆಯ ಸ್ಥಾಪಿತ ವ್ಯವಸ್ಥೆಯೊಂದನ್ನು ರೂಪಿಸಿಕೊಂಡ ಒಂದು ಪುರುಷ ವರ್ಗ; ಇಂಥ ಸಮಾಜದಲ್ಲಿ, ಹೆಣ್ಣನ್ನು ಪ್ರೇಮ, ಸಹನೆಗಳ ಪ್ರತೀಕವಾಗಿ ಚಿತ್ರಿಸುವ ಒಂದು ಅವಶ್ಯಕತೆ ಸಾಹಿತ್ಯದ ಪಾಲಿಗೆ ಒದಗಿದ್ದರಿಂದ ಕಾರಂತರು ಇಂಥದೊಂದು ಚಿಕಿತ್ಸಕ ದೃಷ್ಟಿಯನ್ನು ತನ್ನ ಬರವಣಿಗೆಯಲ್ಲಿ ಕಂಡು ಕೊಂಡು ಸ್ತ್ರೀ ಪಾತ್ರಗಳನ್ನು ಎತ್ತರಿಸುವ ಸಾಹಸ ಮಾಡಿದ್ದಾರೆ ಎನ್ನಬಹುದು. ಕಾರಂತರ ದೃಷ್ಟಿಕೋನದಲ್ಲಿಯೂ ಭಾರತೀಯ ಕುಟುಂಬಗಳು ಎದುರಿಸುವ ಸಮಸ್ಯೆಗಳಲ್ಲಿ ಗಂಡಿಗಿಂತ ಹೆಚ್ಚಾಗಿ ಹೆಣ್ಣನ್ನೇ ಬಾಧಿಸುವ ಪ್ರಸಂಗಗಳು ಸಹಜವಾಗಿ ಕಂಡದ್ದರಿಂದ, ಅವಳು ವಹಿಸುವ ಧೈರ್ಯ ಸ್ಥೈರ್ಯಗಳ ಮುಂದೆ ಸಹನೆ, ಸಂಯಮಗಳ ಪ್ರಖರತೆಯಲ್ಲಿ ಪುರುಷ ಪಾತ್ರಗಳು ಸಹಜವಾಗಿಯೇ ತೇಜೋಹೀನವಾಗುತ್ತವೆ. ಇಡಿಯ ಬದುಕಿನ ಸೂತ್ರಧಾರಿಕೆಯಲ್ಲಿ ಅವಳ ಅರಿವಿನ ಮಟ್ಟದ ಮಿತಿಯಲ್ಲಿ ಹೊರಹೊಮ್ಮುವ ಕೆಲವೊಂದು ವಿಚಾರಗಳು, ಆ ವ್ಯಕ್ತಿತ್ವವನ್ನೂ ಮೀರಿ ನಿಲ್ಲುವ ಸಂವೇದನಾಶೀಲತೆ-ಇಂಥವುಗಳನ್ನು ಮಾತ್ರ ಗಮನಿಸದೆ, ನಾವು ಮುಂದೆ ಹೋಗಲಾಗುವುದಿಲ್ಲ. ಪರಿಸ್ಥಿತಿಯನ್ನೇ ನಂಬಿಕೊಂಡು ಮೂಲೆ ಗುಂಪಾಗಿ 'ಗುಂಪಿನಲ್ಲಿ ಗೋವಿಂದ' ಎನ್ನಿಸುವ ಪಾತ್ರ ಚಿತ್ರಣಕ್ಕಿಂತ ಒಂದು ಪ್ರತ್ಯೇಕ ಅಭಿವ್ಯಕ್ತಿಯಲ್ಲಿ ಕಾಯಕಲ್ಪಗೊಳಿಸುವುದನ್ನೇ ಕಾರಂತರು ಮಾಡುತ್ತಾರೆ. ನಮ್ಮಲ್ಲಿನ ಸಂದೇಹಗಳಿಗೆ ಇದೊಂದು ಉತ್ತರವೆಂದು ತಿಳಿದುಕೊಂಡರೆ ಮಾತ್ರ ಸಾಮಾನ್ಯತೆಯ ಒಳಗಿನ ಅಸಮಾನ್ಯತೆ ಅರ್ಥವಾಗುತ್ತದೆ. ಇದು ಸಂಪ್ರದಾಯ ಶರಣತೆಯಲ್ಲಿಯೂ ಸ್ವಾಭಿಮಾನದ ಕಿಡಿ ಜ್ವಲಂತವಾಗಿರುವ ಒಂದು ಜಾಗೃತ ಸ್ಥಿತಿ, ಕೌಟುಂಬಿಕ ಪ್ರೀತಿಯ ಶುದ್ಧ ಸೆಲೆಯಾಗಿ ಕಾಣುತ್ತದೆ.

## ಕೊನೆ ಟಿಪ್ಪಣಿ


೧. ಡಾ. ರೇವಯ್ಯ ಒಡೆಯರ್, ಡಾ. ಶಿವರಾಮಕಾರಂತರ ಕಾದಂಬರಿಗಳಲ್ಲಿ ಮಾನವೀಕರಣದ ನೆಲೆಗಳು, ಕನ್ನಡ ಸಾಹಿತ್ಯ ಪರಿಷತ್ತು, ಪು.೧ – ೨೦೦೮.

೨. ಮರಳಿ ಮಣ್ಣಿಗೆ, ಪುಟ – ೨೩೯

೩. ಮರಳಿ ಮಣ್ಣಿಗೆ, ಪುಟ – ೫೭

೪. ಮರಳಿ ಮಣ್ಣಿಗೆ, ಪುಟ – ೨೩೫

೫. ಮರಳಿ ಮಣ್ಣಿಗೆ, ಪುಟ – ೨೬೬

೬. ಮರಳಿ ಮಣ್ಣಿಗೆ, ಪುಟ – ೭೪

೭. ಜಿ.ಎಸ್. ಆಮೂರ, ಕನ್ನಡ ಕಥನ ಸಾಹಿತ್ಯ ಕಾದಂಬರಿ, ಶ್ರೀಹರಿ ಪ್ರಕಾಶನ, ಧಾರವಾಡ, ೧೯೯೪, ಪುಟ – ೧೮.

೮. ಮರಳಿ ಮಣ್ಣಿಗೆ, ಪುಟ – ೩೭೦

# ಅಧ್ಯಾಯ – ೦೫

## ಮರಳಿ ಮಣ್ಣಿಗೆ ಕಾದಂಬರಿಯ ಭಾಷೆ ಮತ್ತು ಶೈಲಿ

ಸಾಹಿತ್ಯ ನಿರ್ಮಿತಿ ಅಂದರೆ ಯಾವುದೋ ಒಂದು ಗ್ರಂಥಾಲಯ ತುಂಬುವುದಕ್ಕೋಸ್ಕರ ಮಾಡುವ ಕೆಲಸ ಅಲ್ಲ. ಅದು ಸಮಾಜದಲ್ಲಿ ಜೀವಂತವಾಗಿ ಕಾಣಿಸಬೇಕು, ಸಮಾಜದ ಕೊನೆಯ ಸಾಲಿನಲ್ಲಿ ನಿಂತವನಿಗೂ ಅದು ಮುಟ್ಟಬೇಕು, ತಟ್ಟಬೇಕು ಎಂಬ ಧ್ಯೇಯದಿಂದ ಸಾಹಿತ್ಯ ನಿರ್ಮಿತಿ ಮಾಡುವ ಕೆಲವೇ ಲೇಖಕರಲ್ಲಿ ಕಾರಂತರು ಒಬ್ಬರಾಗಿದ್ದಾರೆ.

'ಸಾಹಿತ್ಯ ಕೇವಲ ಭಾಷಿಕ ರೂಪವನ್ನು ಮಾತ್ರ ಅವಲಂಬಿಸಿಲ್ಲ. ಅದು ರೂಪ ಅಭಿವ್ಯಕ್ತಿ ಪಡಿಸುವ ಅರ್ಥವನ್ನು ಅವಲಂಬಿಸಿಕೊಂಡಿದೆ. ಕಾರಣ, ಸಾಹಿತ್ಯ ಕೃತಿಗಳ ಭಾಷಾ ವೈಜ್ಞಾನಿಕ ವಿಶ್ಲೇಷಣೆಯಲ್ಲಿ ಅರ್ಥ ವಿವೇಚನೆಗೂ ಪ್ರಾಧಾನ್ಯತೆ ಸಿಕ್ಕಿದೆ.

ಗ್ರಾಮೀಣ ಕಾದಂಬರಿ 'ಮರಳಿ ಮಣ್ಣಿಗೆ' ಯಾಜಮಾನ್ಯ ಪದ್ಧತಿ, ಕಡಲು ಇವುಗಳನ್ನು ನಿರ್ದೇಶಿಸುವ ಭಾಷೆ. ಒಂದು ಶಿಸ್ತಿಗೆ ಒಳಪಟ್ಟಂತೆ ಪರಿಷ್ಕಾರದ ಸ್ವರೂಪದಲ್ಲಿ ಆವಿರ್ಭವಿಸುತ್ತದೆ. ಕರಾವಳಿಯ ಜನರ ಭಾಷೆ ಗಾಂಭೀರ್ಯದಿಂದ ಸೊಗಸಿದರೆ ಬೆಟ್ಟದ ಮಡಿಲಿನ ಭಾಷೆ ಗಹನವೆನಿಸುತ್ತದೆ. ಉದಾ: ರಾಮ ಐತಾಳರು ದತ್ತು ತೆಗೆದುಕೊಳ್ಳುವ ವಿಚಾರವನ್ನು ಬಿಟ್ಟು ಎರಡನೆಯ ಲಗ್ನವಾಗಲು ಯೋಚಿಸುತ್ತಿದ್ದಾರೆ– 'ನನ್ನ ಸರಸೋತಿ. ನಾಲ್ಕು ವರ್ಷಗಳಿಂದಲೂ ದತ್ತು ಮಾಡಿಕೋ ಎಂದು ವರಾತ ಹಿಡಿಯುತ್ತಾಳೆ. ದತ್ತುಕೊಳ್ಳುವ ಸಂಗತಿ. ನನಗೆ ಹಿಡಿಸಲಿಲ್ಲ ಯಾರ್‍ಯಾರ ಮನೆಯ ಮುಂಡಕದ ಗಿಡವನ್ನು ತಂದು. ನಮ್ಮ ಮನೆಯ ಕೇದಗೆ ಮಾಡಲು ಬಂದೀತೇ ? ಮುಂಡಕ. ಮುಂಡಕವೇ. ಕೇದಗೆ ಕೇದಗೆಯೇ' ಪರರಶಿಶುವನ್ನು ತಂದು ಸಾಕುವುದೆಂದರೆ ಒಂದು ಮರದ ಚಕ್ಕೆಯನ್ನು ಇನ್ನೊಂದು ಮರಕ್ಕೆ ಅಂಟಿಸಿದಂತೆ ಅದೆಂದೂ ಹೊಂದಿಕೆಯಾಗದು ಎನ್ನುವ ಅವರದು ಮಾತಿನ ಸಮರ್ಥನೆಗೆ ಬಳಸಿಕೊಂಡ ಭಾಷೆ. ಸಾಂಕೇತಿಕವಾಗಿ ಮನುಷ್ಯನ ಅಂತರಂಗಕ್ಕೆ ಬೆಳಕು ಹಿಡಿಯುತ್ತದೆ.

ಗಂಡನ ದುರ್ವರ್ತನೆಯಿಂದ ಹೆಂಡತಿ ನಾಗವೇಣಿ ನೊಂದಿದ್ದಾಳೆ. ತನ್ನ ಮಗುವಿನ ಮರಣದಿಂದ ವ್ಯಥೆಗೀಡಾದ ಅವಳ ಮನಸ್ಸು ದೀರ್ಘಕಾಲದ ಬಳಿಕ ತಿರುಗಿ ಬಂದ ಗಂಡನಿಂದಾಗಿ ಹಿಗ್ಗುವುದೂ ಇಲ್ಲ. ಆಕೆಯ ಮೌನವನ್ನು ಭೇದಿಸಲು ಆತ ಯತ್ನಿಸಿದನೆಂದರೆ ಅವಳು ಹೇಳುತ್ತಾಳೆ.

'ನನ್ನ ಹತ್ತಿರ ಹೇಳಲೇನಿದೆಯೆಂದು ಮಾತನಾಡಿಸುವುದು? ಕಾಲ ಕಸವಾಗಿ ನಮ್ಮನ್ನೂ ತುಳಿದು ಹೋದವರು ನೀವು. ಈಗ ನಮ್ಮ ಮೇಲೆಯೇ ಏಕೆ ಮಾತಿನ ಭಾರ ಹೊರಿಸುತ್ತೀರಿ ? ಅವನ ತಪ್ಪುಗಳನ್ನು ಅವನಿಗೆ ರಾಚಿ ಬಿಡುವ ಸಂತಾಪದಲ್ಲಿಯೂ ಭಾಷೆಯಲ್ಲಿ ಹಿಡಿತ ಹಾಗೂ ಸಂಯಮ ಸಾಧಿಸಿದ್ದಾರೆ.

ಒಮ್ಮೆ ಹೋಟೆಲಿನ ದುಡಿತದಿಂದ ಬೇಸತ್ತು ರಾಮ ಊರಿಗೆ ಹೋಗಬೇಕೆಂದು ಬಯಸಿದಾಗಲೇ ತಾಯಿ ನಾಗವೇಣಿ ಮಗನನ್ನು 'ರಜೆ ತೆಗೆದುಕೊಂಡು ಮನೆಗೆ ಬಾ' ಎಂದು ಬರೆದಿದ್ದಾಳೆ. ರಜೆಯೂ ದೂರಕಿದೆ; ರಾಮ, ಊರಿಗೆ ಬಂದವನೂ ರಾತ್ರಿಯ ಊಟ ಮುಗಿಸಿ ಅರಾಲಿಗೆ ಹೋಗಲು ಬಯಸಿದ್ದಾನೆ.

ಅಮ್ಮ ಪಾತ್ರೆ ತೊಳೆಯುವುದು ನಾಳೆಗೆ ಎಲ್ಲ ಕೆಲಸವೂ ನಾಳೆಗೆ, ಹೊರಗೆ ಬೆಳದಿಂಗಳನ್ನು ನೋಡು, ನಾನು ಬಂದಿದ್ದೇನೆಂದು ಅದೂ ಬಂದಿದೆ, ಮಗನ ಆಗಮನದಿಂದ ತಾಯಿಯ ಮನಸ್ಸು ತಂಪಾಗಿದೆ. ಮಗನ ಹೃದಯವೂ ಹೂವಿನಂತೆ ಹಗುರಾಗಿದೆ. ಇಂಥ ಸುಂದರ ಸಮನ್ವಯದ ಕಲ್ಪನೆಯನ್ನು ಭಾಷೆ ಅರಳಿಸುವ ಕೆಲಸ ಸಾಮಾನ್ಯವಾದುದಲ್ಲ, ಸರಳ ಭಾಷೆಯ ಗರ್ಭದಲ್ಲಿ ಇಂಥ ಮಿಂಚಿನ ಸೆಳಕುಗಳು ಆಗಾಗ ಸನ್ನಿವೇಶಗಳಿಗೆ ಹೊಸ ಹೊಸ, ಭಾವ ಅರ್ಥಗಳನ್ನು ನೀಡಿ ಸಂಪನ್ನವಾಗುತ್ತವೆ.

ಲಚ್ಚನ ಉದ್ಧಟತನ ಸರಸೋತಿಯ ಬದುಕುವ ಆಸೆಯನ್ನು ನಂದಿಸಿದೆ. ಕಾಶೀಯಾತ್ರೆ ಮಾಡಿದ ಶಾಂತಿ ಕದಡಿದೆ. ಸಾವನ್ನೂ ಮುಂದೂಡುತ್ತ, ಇತರರಲ್ಲಿಯೂ ಬದುಕಿನ ಬಗೆಗೆ ಶ್ರದ್ಧೆ ಬೆಳೆಸುತ್ತ ಬಂದ ಅವಳು ಈಗ–ನಾನು ಎಷ್ಟು ಬೇಗ ಕಣ್ಮುಚ್ಚಿದರೂ ಅಷ್ಟು ಅನುಕೂಲ ಎಂದು ದುಃಖಪಡುತ್ತಾಳೆ.

ಪಾರೋತಿ ರಾಮ ಐತಾಳರು, ಸರಸೋತಿ, ಸತ್ಯಭಾಮೆ ಇವರೆಲ್ಲರನ್ನೂ ಕಳೆದುಕೊಂಡ ನಾಗವೇಣಿಗೆ ಈಗ ಕೋಡಿಯ ಮನೆಯಲ್ಲಿ ಮಗು ರಾಮನೊಬ್ಬನೇ ಸಂಗಾತಿ. ಆತನ ಕಡಲ ಪ್ರೇಮ ಅವಳಿಗೆ ಆಶ್ಚರ್ಯ ಉಂಟು ಮಾಡಿದೆ. ಆ ಮಗುವಿನ ಸಮಾಧಾನಕ್ಕಾಗಿ ಕಡಲ ದಂಡೆಗೆ ಒಯ್ಯುತ್ತಾಳೆ. ಮನದಲ್ಲಿ ಬಡತನ ಬೇಗೆ ಕುದಿಯುತ್ತಿದೆ. ಮುಖ ನಗು ಕಳೆದುಕೊಂಡಿದೆ. ಯಾರೂ ತನ್ನನ್ನು 'ಬಾ' ಎಂದವರಿಲ್ಲ ಎಂಬ ಬೇಸರ. ಅವಳ ತುಟಿಯನ್ನು ಬಿಗಿಗೊಳಿಸಿದೆ. ಕಡಲ ದರ್ಶನದಿಂದ ಸೂರ್ಯಬಿಂಬ ತೇಜಸ್ಸಿನಿಂದಾಗಿ ಮತ್ತೆ ಬಾಳಿನ ಆಸೆ ಚಿಗುರ ತೊಡಗುತ್ತದೆ. ಮಗುವಿನ ಬೇಸರ ಸಾಕೆಂದು. ತನ್ನ ಬೇಸರ ಹೊರೆಯನ್ನು ಹೊರುತ್ತ ಕಡಲಿನ ಕಡೆಗೆ ಸಾಗಿದಳು. ಆಗಾಗಲೇ ಬಾನು ಕೆಂಪಡರಿತು. ಕಡಲ ಅಂಚಿನ ತುಸು ಮೇಲಕ್ಕೆ ತೆಂಕು,

ಬಡಗುಗಳನ್ನೊಂದಾಗಿಸುವ ಕಂದು ಬಣ್ಣದ ಮುಗಿಲೊಂದು ವಿಶಾಲವಾಗಿ ಚಾಚಿತ್ತು. ಹಿಂದಿನ ಸೂರ್ಯ, ಅದರ ಅಂಚುಗಳನ್ನು ಕುಲುಮೆಯಲ್ಲಿ ಕಾಯಿಸಿದ ಲೋಹದ ಕಂಬಿಗಳಿಂದ ಬೆಳಗುವಂತೆ ಬೆಳಗಿದ್ದನು.

ನಾಗವೇಣಿಯು ಸೂರ್ಯದೇವರನ್ನು ಕಾಣುತ್ತ ಕಣ್ಮುಚ್ಚಿದಳು. ಅವಳ ಕೈಗಳು ಭಕ್ತಿಯಿಂದ ಅವನ ಕಡೆಗೆ ಒಡ್ಡಿದುವು. ಮನೆಗೆ ವೇಳೆಯಾಯಿತೆಂದು ಹಿಂದಿರುಗಿ ನೋಡಿದರೆ, ಚೌತಿಯ ಚಂದ್ರ ಮೂಡಿದ್ದನು. ಆ ಆವರಣವೆಲ್ಲವೂ ಅಷ್ಟೊಂದು ಶಾಂತವಾಗಿತ್ತು. ಮನದ ಹುಣ್ಣುಗಳೆಲ್ಲ ಮಾಯವಾಗಿ ಯಾವುದೋ ಸಂತಸದ ನಗು ಬಾಳ್ವೆಯನ್ನು ಉಕ್ಕಿಸುವಂತಿತ್ತು.

ಕಾರಂತರ ಆಸಕ್ತಿ ತಿಂಡಿ ತೀರ್ಥಗಳ ಕ್ಷೇತ್ರವನ್ನು ಪ್ರವೇಶಿಸುತ್ತದೆ. ಯಾರ್ಯಾರಿಗೆ ಯಾವ್ಯಾವುದು ಮೆಚ್ಚು ಎಂಬ ನಾಲಿಗೆಯ ರುಚಿಯಿಂದಲೇ ಮಾನವ ವ್ಯವಹಾರದ ಆಸಕ್ತಿಗಳನ್ನು ಅವರು ಎತ್ತಿ ತೋರಿಸುತ್ತಾರೆ. ರಾಮ ಐತಾಳರಿಗೆ ಅವಸರ ಬಹಳ. ಏನು ನಿನ್ನೆ ಮಧ್ಯಾಹ್ನ ಉಂಡರೆ ಮುಂದಿನ ವಾರಕ್ಕೂ ಹಸಿವು ತಟ್ಟುವುದಿಲ್ಲ ಎಂದು ತಿಳಿಯುತ್ತೀಯೋ ಎಂದು ಪಾರೋತಿಯ ಕೈಕಾಲು ಬಿಡಿಸುತ್ತಾರೆ.

ಹುಳಿಮಾವಿನ ಹಣ್ಣು ಮತ್ತು ಸೌತೇಕಾಯಿ ಬೆರಸಿದ ಹುಳಿ ಒಂದು ಮುಷ್ಟಿ ಅನ್ನವನ್ನು ಜಾಸ್ತಿಯಾಗಿಯೇ ತಿನ್ನಿಸುತ್ತದೆ. ಮಳೆಗಾಲದಲ್ಲಿ ಕೆಸುವಿನ ಸೊಪ್ಪು ಕೊಚ್ಚಿ ಹಾಕಿ ಚಟ್ನಿ ತಯಾರಾಗುತ್ತದೆ. ಎರಡು ಚಟ್ನಿ ಸಾಲುವುದಿಲ್ಲ, ಆದ್ದರಿಂದ ಒಂದಿಷ್ಟು ಅವಲಕ್ಕಿಯನ್ನು ನೀರಲ್ಲಿ ತೊಳೆದು ಉಪ್ಪು ಕಾರ ಹಾಕಿ, ಹಸಿಮೆಣಸು ಸುರಿದೋ ಉಪ್ಪಿನಕಾಯಿರಸ ಹಾಕಿಯೋ ಕಿವುಚಿ ತಿನ್ನು–ಇದು 'ಉಪಹಾರದ ಶಾಸ್ತ್ರ' ಪಾರೋತಿ–ಸರಸತೋತಿಯರ ಬಾಂಧವ್ಯ ಬಡತನದಲ್ಲಿಯೂ ಉಪ್ಪು ಕಾರ ಹಚ್ಚಿದ ಚಟ್ನಿಯಂತೆ, ಇಲ್ಲವೇ ತೊಳೆದ ಅವಲಕ್ಕಿಯಂತೆ, ಹಿತಕರವಾಗಿಯೇ ಇರುತ್ತದೆ.

ನಾಗವೇಣಿ ಪಿಟೀಲು ನುಡಿಸಲು ಕಲಿತಳು. ಮಗನಿಗೂ ಕಲಿಸಿದಳು. ಬೇಸರ ಮರೆಯಲು ಬದುಕಿನಲ್ಲಿ ಭರವಸೆ ಬೆಳೆಯಲು ಅದೇ ಆಧಾರವೆನಿಸಿದೆ ಇಬ್ಬರಿಗೂ. 'ರಾಮನ ಕೈಯು ಕಡಲಿನ ದನಿಗೆ ಶ್ರುತಿಗೂಡಿಸಿತು. ಎಳೆಗಾಳಿಯೊಂದರಂತೆ ರಾಮ ರಾಗದ ಸುಳಿಯೊಂದನ್ನು ಚಿಮ್ಮಿಸಿ, ಅದನ್ನು ಮೆಲುದೆರೆಗಳಂತೆ ಏರಿಸಿ, ಇಳಿಸಿ, ಹಾಸಿ ಹರಡಿಸಿ ನಲಿಸುತ್ತಿದ್ದನು. ಬಾನಲ್ಲಿ ಬೆಳ್ಳಿ ಮೂಡಿದರೂ ರಾಮನ ಕೈ ತಡೆಯಲಿಲ್ಲ ಕಡಲನ್ನು ಪ್ರೀತಿಸುವ ಮನಸ್ಸು ಅದರ ಅಲೆಗಳನ್ನು ಬಿಟ್ಟೀತೇ ? ಸಂಗೀತವೂ ಅಂತೆಯೇ ಕಾರಂತರ ಸಂಗೀತ ಪ್ರೇಮ, ರಾಮನ ಪಿಟೀಲಿನ ಪ್ರೇಮವೂ

ಆಗಿ, ಬದುಕನ್ನು ಪ್ರೀತಿಸುವ ಒಂದು ಸಂಕೇತವೂ ಎನಿಸಿಕೊಂಡು ರಾಮ ಮರಳಿ ಮಣ್ಣಿಗೆ ತಿರುಗಿ ಬರುವಂತಾಗುತ್ತದೆ.

ಲಯವಿಲ್ಲದ ಬದುಕಿನ ಗತಿಗಳಿಗೆ ಮತ್ತೆ ಶೃತಿ ಕೂಡಿಸುವ 'ಪಿಟೀಲು' ಚಿಂತೆಯನ್ನು ಮೆಟ್ಟಿ ಹಸನು ಬಾಳನ್ನು ಕಟ್ಟುವ ಜೀವ ಸಂಜೀವಿನಿಯೂ ಆಗುತ್ತದೆ.

ಕಾರಂತರು ತಮ್ಮ ಕೃತಿಗಳಲ್ಲಿ ಉಲ್ಲೇಖಿಸುವ 'ಚಿತ್ರಕಲೆ' ಇಂಥದೇ ಹಲವು ಸಂಕೇತಗಳಿಗೆ ಸಂವಾದಿಯಾಗುತ್ತದೆ. ಮರಳಿ ಮಣ್ಣಿಗೆ ಕಾದಂಬರಿಯ, ರಾಮನಿಗೆ ಚಿತ್ರಕಲೆಯ ಅರಿವು ಮಾಡಿಕೊಡುವ ಪ್ರಸಂಗವಾದರೂ, ಆತನ ಕಲಾಭಿಜ್ಞತೆಗೆ ಪೂರಕವಾದುದು. ಇದಕ್ಕೆ ಪ್ರತಿಯಾಗಿ ಯಹೂದಿಗಳ ದುಃಖಸಾಗರವನ್ನು ಬಿಂಬಿಸಲೋ ಎಂಬಂತೆ ಅವನ ಪಿಟೀಲು ವಾದನ, ಜೀವನ ಲಹರಿಗೆ ಪ್ರತೀಕಗಳೆಂಬಂತೆ ಬಳಸುವ ಈ ಸಾಧನಗಳಿಂದ ಮನಸ್ಸನ್ನು ಹಗುರಗೊಳಿಸಬಹುದೆಂದು ಕಾರಂತರ ತಿಳಿವಳಿಕೆಯಾದ್ದರಿಂದಲೂ, ಪ್ರತಿಮಾ ರೂಪದಿಂದ 'ವಸ್ತು'ವಿಗೆ ಅವು ಕಳೆ ನೀಡುತ್ತವೆ. ಮರುದಿನ ಬೆಳಿಗ್ಗೆ ಅವನು ಮನೆಯ ಚಾವಡಿಯಲ್ಲಿ ಕಾಗದವನ್ನು ಬಿಡಿಸಿ, ತನ್ನ ಹಿಂದಣ ಸಂಜೆಯ ಕನಸನ್ನು ಬರೆಯುತ್ತಿದ್ದನು. ದೆವ್ವದಂತಹ ನಾಲ್ಕು ಹಸಿ ಮರಗಳು ನೆಲದಿಂದ ಬಾನನ್ನು ಸೀಳಿದ್ದುವು. ಎದುರಿಗೆ ಕಾಲು ಬುಡದಲ್ಲಿ ನಗುವ ಮೋಡಗಳನ್ನು ಬಿಂಬಿಸುತ್ತಿದ್ದ ವಿಶಾಲವಾದ ಹಾಳೆಯೊಂದಿತ್ತು. ಅದರಿಂದಾಚೆ ಕಡಲ ದಿನ್ನೆ, ಮುಂದೆ ರೌದ್ರವಾಗಿ ಹುಚ್ಚೆದ್ದು ನಗುತ್ತಿರುವ ಅಲೆಗಳು. ಅದರ ತೀರ ಊಟಕ್ಕೆ ತಾಯಿ ಕರೆಯುವ ತನಕವೂ ಅವನ ಕುಂಚಿನ ಆಟ ಸಾಗಿತ್ತು. ರಾಮನ ಈ ಚಿತ್ರ, ಐತಾಳರ ವಂಶವು ನಡೆದು ಬಂದ ದಾರಿ. ಕಂಡ ಕನಸು, ಅನುಭವಿಸಿದ ನೋವು, ಬದುಕಿನ ತಳಮಳ, ಮುಂದೆ ಹೊಮ್ಮಿದ ಬೆಳಕು. ಇಡಿ ಆ ಕಾದಂಬರಿ ಇಲ್ಲಿ ಮತ್ತೆ ಮೈ ತಳೆದು ನಿಲ್ಲುವ ಅದ್ಭುತ ಸನ್ನಿವೇಶವಿದು.

ಕಾರಂತರು ನಮ್ಮೆಲ್ಲರ ನಡುವೆ ತ್ರಿವಿಕ್ರಮನಂತೆ ಬೆಳೆದವರಾದರೂ ನಮಗೆಲ್ಲ ಅತ್ಯಂತ ಪ್ರಿಯರಾದವರು. ಮಕ್ಕಳಿಂದ ಹಿಡಿದು ಅಕ್ಷರದ ಅರಿವು ಇಲ್ಲದ ಗ್ರಾಮೀಣ ಜನರಿಗೂ ಎಟಕುವ ಸಾಹಿತಿ. ಮುಖವಾಡ ಮತ್ತು ಆಷಾಢಭೂತಿನಗಳಿಲ್ಲದ ಮಾನವತಾವಾಧಿ ಕಾರಂತರ ಸಾಹಿತ್ಯ ಮತ್ತು ಕಾರಂತರ ವ್ಯಕ್ತಿತ್ವ–ಇವೆರಡರಲ್ಲಿ ಭಿನ್ನತೆ ಇಲ್ಲ.

# ಸಮಾರೋಪ

ಡಾ. ಕೆ. ಶಿವರಾಮಕಾರಂತರ 'ಮರಳಿ ಮಣ್ಣಿಗೆ' ಕಾದಂಬರಿಯು 'ಸ್ತ್ರೀ ಲೋಕ' ಎಂಬ ಶೀರ್ಷಿಕೆಯ ನಾನು ಅಧ್ಯಯನದಲ್ಲಿ ನಾನು ಗಮನಿಸಿದ ಒಟ್ಟು ಅಂಶಗಳು ಈ ರೀತಿ ಇವೆ.

- ಸ್ತ್ರೀವಾದಿ ಆಲೋಚನೆಯ ಧೋರಣೆಯು ಕಾರಂತರ ಕಾದಂಬರಿಗಳ ಬಹುಮುಖ್ಯ ಆಶಯವಾಗಿದೆ.

- ದಕ್ಷಿಣ ಕನ್ನಡ ಜಿಲ್ಲೆಯ ಸ್ಥಿತ್ಯಂತರವನ್ನು ಕಾರಂತರ ಕಾದಂಬರಿಗಳಲ್ಲಿ ಕಾಣಬಹುದಾಗಿದೆ. ಹಾಗಾಗಿ ಕಾರಂತರ ಕಾದಂಬರಿಗಳ ಮುಖಾಂತರ ಒಂದು ಪ್ರಾದೇಶಿಕ ಸಾಂಸ್ಕೃತಿಕ ಸ್ಥಿತ್ಯಂತರದ ಸ್ತ್ರೀಲೋಕವನ್ನು ಈ ಅಧ್ಯಯನದಲ್ಲಿ ಅನಾವರಣಗೊಳಿಸಲಾಗಿದೆ.

- ಮಾತೃಪ್ರಧಾನ ಕುಟುಂಬದ ಚಾರಿತ್ರಿಕ ಅಂಶಗಳನ್ನು ಬೆಳಕಿಗೆ ತರುವ ಉದ್ದೇಶಕ್ಕಿಂತ ಕಾರಂತರ ಕಾದಂಬರಿಗಳಲ್ಲಿ ಸ್ತ್ರೀತ್ವದ ಪರಿಕಲ್ಪನೆಗಳನ್ನು ಅರಿಯಲಾಗಿದೆ.

- ಸಾಂಸ್ಕೃತಿಕ ಸ್ತ್ರೀವಾದಿ ದೃಷ್ಟಿಕೋನಗಳಿಂದ, ಕಾರಂತರ ಕಾದಂಬರಿಗಳ ಪುನರ್ ಮೌಲ್ಯಮಾಪನ ಈ ಅಧ್ಯಯನದ ಉದ್ದೇಶವಾಗಿದೆ.

- ಪ್ರಾದೇಶಿಕ ಕಲಾ ಪ್ರಪಂಚವು ಇವರ ಕಾದಂಬರಿಗಳಲ್ಲಿ ಬರುವುದರಿಂದ ಕಲೆ-ಸಾಹಿತ್ಯ ಮಾದರಿಯ ಅಂಶಗಳು ಇಲ್ಲಿ ಪರಿಗಣನೆಗೊಳ್ಳುತ್ತವೆ. ಕಾರಂತರ ಕಾದಂಬರಿಗಳಲ್ಲಿ ರೂಪುಗೊಂಡಿರುವ ಸ್ತ್ರೀತ್ವದ ನೆಲೆಯನ್ನು ಕೌಟುಂಬಿಕ, ಸಾಮಾಜಿಕ, ಧಾರ್ಮಿಕ ಪರಿಕಲ್ಪನೆಗಳ ಮೂಲಕ ಪರಿಶೋಧಿಸಲಾಗಿದೆ.

- ಕಾರಂತರ ಕಾದಂಬರಿಗಳಲ್ಲಿ ಸ್ತ್ರೀತ್ವದ ಪ್ರತೀಕವು ಗಂಡು ಮತ್ತು ಹೆಣ್ಣು ಎನ್ನುವ ಕೇವಲ ದೈಹಿಕ ವ್ಯತ್ಯಾಸಗಳಿಂದ ರೂಪುಗೊಂಡಿಲ್ಲ. ಈ ದೃಷ್ಟಿಯಿಂದ ಕಾರಂತರ ಕಾದಂಬರಿಗಳಲ್ಲಿ ಬರುವ ಸ್ತ್ರೀ ದೇವತೆಗಳ ಆರಾಧನೆಗಳಾಗಲೀ, ನಿರೂಪಣೆಯಲ್ಲಿನ ಸರಳ ದ್ವಂದ್ವಗಳಾಗಲೀ ಮುಖ್ಯವಾಗಿಲ್ಲ. ಕೆಲವು ಸಂದರ್ಭದಲ್ಲಿ ಕಾರಂತರು ಈ ತರಹದ ಸರಳ ದ್ವಂದ್ವಗಳನ್ನು ಮೀರಿ ನಡೆಯುತ್ತಾರೆ. ಮತ್ತು ಸ್ತ್ರೀತ್ವವನ್ನು ಪ್ರತಿಮಾತ್ಮಕ ಕೇಂದ್ರಗಳ ಮೂಲಕ

ಸಂಯೋಜಿಸುತ್ತಾರೆ, ಇದು ಕನ್ನಡ ಅಧ್ಯಯನದ ಕ್ಷೇತ್ರದಲ್ಲಿ ಕುತೂಹಲದಾಯಕ ಸಂಗತಿಯಾಗಿದೆ.

ಮಾನವನು ತಾನು ಬದುಕುವ ಸಮಾಜದಲ್ಲಿ ಅನುಭವದ ಮೂಲಕ ಒಂದು ವಿಶಿಷ್ಟ ವ್ಯಕ್ತಿತ್ವವನ್ನು ಪಡೆಯುತ್ತಾನೆ. ಆ ವ್ಯಕ್ತಿಯ ಆಲೋಚನೆಗಳು ತಾನು ಬದುಕುತ್ತಿರುವ ಸಮಾಜ ಮತ್ತು ಪರಿಸರದಿಂದ ಪ್ರೇರಿತವಾಗಿರುತ್ತವೆ. ಕರ್ನಾಟಕದಲ್ಲಿ ಕಡಲು ಮತ್ತು ಕಾಡು ಎಂದು ಎರಡೂ ಹೆಸರಿನಿಂದ ಕರೆಸಿಕೊಳ್ಳುವ ನಾಡು, ಪ್ರವಾಸಿಗರ ಬೀಡು ದಕ್ಷಿಣ ಕನ್ನಡಜಿಲ್ಲೆ, ಈ ನಾಡು ಹಲವು ಕಾರಣಗಳಿಂದ ಭಿನ್ನತೆಯನ್ನು ಹೊಂದಿದೆ. ಈ ಕಾದಂಬರಿಯಲ್ಲಿ ಇದೇ ನಾಡಿನಲ್ಲಿ ನಡೆಯುವ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಸ್ತ್ರೀ ಬದುಕಿನ ಸಾರ್ಥಕತೆಯನ್ನು ವಿಶ್ಲೇಷಿಸುವ ಪ್ರಯತ್ನವನ್ನು ಮಾಡಿರುತ್ತೇನೆ.

ಒಂದು ಕಾಲಕ್ಕೆ ಮಾತೃ ಪ್ರಧಾನ ದೇಶವಾಗಿದ್ದ ಭಾರತದೇಶ ಅನಂತರದ ದಿನಗಳಲ್ಲಿ ಪಿತೃಪ್ರಧಾನವಾಗಿ ರೂಪುಗೊಂಡಿದ್ದು ಬದಲಾವಣೆಯ ಸಂಕೇತ. ಇದು ಸಂಕೇತವಷ್ಟೇ ಆಗಿದ್ದರೆ ಒಪ್ಪಿಕೊಳ್ಳಬಹುದಾಗಿತ್ತು. ಬದಲಾವಣೆಯೊಂದಿಗೆ ಸ್ತ್ರೀಯರ ಮೇಲೆ ಇಲ್ಲಸಲ್ಲದ ಆಚಾರ-ವಿಚಾರ, ರೀತಿ-ನೀತಿ, ನಡೆ-ನುಡಿಗಳೆಂದು ಸಂಪ್ರದಾಯದ ಸರಪಳಿಯಲ್ಲಿ ಬಂಧಿಸಿದ್ದು ಒಂದು ಕಡೆ ದುರಂತ ಎಂದು ತಿಳಿಯಬಹುದು.

ಮಹಿಳೆಯನ್ನು ಒಂದು ಕಾಲದಲ್ಲಿ ಅವಳು ಮಕ್ಕಳನ್ನು ಹಡೆಯುವ ಯಂತ್ರ ಎಂದು ಕರೆಯುತ್ತಿದ್ದರು. ಆದರೆ ಇವತ್ತಿನ ದಿನದಲ್ಲಿ ಮಹಿಳೆ ಅಬಲೆಯಲ್ಲ ಅವಳು ಸಬಲೆ ಎಂದು ತೋರಿಸುವ ಪರಿಕಲ್ಪನೆಯನ್ನು ನಾವು ತಿಳಿಯಬಹುದು.

ಪ್ರತಿಯೊಂದು ರಂಗದಲ್ಲೂ ಮಹಿಳೆ ತನ್ನ ಸ್ಥಾನ ಪಡೆದಿದ್ದಾಳೆ.

ಸ್ತ್ರೀಯು ವೃತ್ತಿರಂಗದಲ್ಲಿ ತನ್ನ ವಿಚಾರ ವಂತಿಕೆಯನ್ನು ಹೆಚ್ಚಿಸಿಕೊಂಡಿದ್ದಾಳೆ. ಸ್ತ್ರೀಯು ಸಹ ತುಂಬು ಮಾನವೀಯತೆ ಗುಣಗಳನ್ನು ಒಳಗೊಂಡಿದ್ದಾಳೆ.

ಎಲ್ಲಿ ಸ್ತ್ರೀ ಇರುತ್ತಾಳೋ ಅಲ್ಲಿ ಶಾಂತಿ ನೆಲೆಸುತ್ತದೆ ಎಂಬ ಮಾತು ಈ ಕಾದಂಬರಿಯಲ್ಲಿ ಬರುವ ಪಾರೋತಿ ಪಾತ್ರದಲ್ಲಿ ನಾವು ಗಮನಿಸಬಹುದು. ಇವತ್ತಿನ ದಿನದಲ್ಲಿ ಪಾರೋತಿಯಂತಹ ಸ್ತ್ರೀಯು ಇದ್ದಾರೆ ಎಂದರೆ ತಪ್ಪಾಗಲಾರದು.

ಸ್ತ್ರೀಯು ಮಕ್ಕಳ ಲಾಲನೆ, ಪಾಲನೆ ಮಾಡಿ ಅನಂತರ ಮುಂದಿನ ಭವಿಷ್ಯ ರೂಪಿಸುವಲ್ಲಿ ಯಶಸ್ವಿಯಾಗುತ್ತಾಳೆ.

ತಾಯಿಯೇ ಮಗುವಿಗೆ ಮೊದಲ ಗುರು ಎಂಬ ಮಾತು ಈ ಕಾದಂಬರಿಯ ನಾಗವೇಣಿ ಪಾತ್ರಕ್ಕೆ ಅನ್ವಯಿಸುತ್ತದೆ.

'ಮರಳಿ ಮಣ್ಣಿಗೆ' ಯ ಮೊದಲ ತಲೆಮಾರಿನ ಸರಸೋತಿ, ಪಾರ್ರೋತಿ, ಎರಡನೆಯ-ಮೂರನೇಯ ತಲಮಾರಿನ ನಾಗವೇಣಿ-ಸರಸ್ವತಿ ಇವರು ಸಹನೆ-ಸಹಾನುಭೂತಿ, ಔದಾರ್ಯದ ಪ್ರತೀಕ ಹೃದಯವಂತಿಕೆ ಕಷ್ಟದ ಸಹನಶೀಲತೆಗಳು ಓದುಗನನ್ನು ತುದಿಗಾಲಿನಲ್ಲಿ ನಿಲ್ಲಿಸಿ ಆಲಿಸುವಂತೆ ಮಾಡುತ್ತವೆ.

# ಪರಾಮರ್ಶನ ಗ್ರಂಥಗಳು

೧. ಜಿ.ಎಸ್. ಆಮೂರ, ಸಮಕಾಲೀನ ಕಥೆ ಕಾದಂಬರಿ-ಹೊಸ ಪ್ರಯೋಗಗಳು ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು – ೧೮ – ೧೯೯೯.

೨. ಶಂಭಾಜೋಶಿಯರ ಸೌಂದರ್ಯ ವಿಚಾರ, ಮಾನವ ಧರ್ಮ ಪ್ರತಿಷ್ಠಾನ, ಬೆಳಗಾವಿ – ೧೯೯೨.

೩. ತೋರೋ, ಆ.ರಾ. ಮತ್ತು ವಿ. ಕುಲಕರ್ಣಿ (ಸಂ) ಪು.ಲ. ದೇಶಪಾಂಡೆ-ಕನ್ನಡ ವಿಭಾಗ, ಮುಂಬಯಿ, ವಿ.ವಿ. – ೧೯೮೯.

೪. ಗಾಯತ್ರಿ ನಾವಡ : ಮಹಿಳಾ ಸಂಕಥನ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು – ೨೦೦೩.

೫. ಮರಳಿ ಮಣ್ಣಿಗೆ, ಎಸ್.ಬಿ.ಎಸ್. ಪಬ್ಲಿಷರ್ಸ್, ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು – ೨೦೦೨.

೬. ಡಾ. ರೇವಯ್ಯ ಒಡೆಯರ್, ಡಾ. ಶಿವರಾಮ ಕಾರಂತರಗಳಲ್ಲಿ ಮಾನವೀಕರಣದ ನೆಲೆಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು – ೨೦೦೮.

೭. ಆಮೂರ ಜಿ.ಎಸ್. : ಕನ್ನಡ ಕಾದಂಬರಿಯ ಬೆಳವಣಿಗೆ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು – ೧೯೮೨.

೮. ಡಾ.ಕೆ. ಶ್ರೀಪತಿ ಹಳಗುಂದ : ಕನ್ನಡ ಕಾದಂಬರಿಗಳಲ್ಲಿ ವೇಶ್ಯಾ ಜೀವನ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು – ೧೮, ೨೦೦೮.

೯. ಡಾ.ಟಿ.ರಾಜೇಂದ್ರ ತಗಡ್ಲಿ, ಶಿವರಾಮಕಾರಂತರ ಕಾದಂಬರಿಗಳು ಸ್ತ್ರೀ ಸಂಕಥನದ ಸ್ವರೂಪ ದೇಸಿ ಪುಸ್ತಕ ಮಾಲೆ ವಿಜಯನಗರ, ಬೆಂಗಳೂರು – ೪೦, ೨೦೦೯.

೧೦. ಶುಭಾದಾಸ್ : ಶಿವರಮ ಕಾರಂತರ ಕಾದಂಬರಿಗಳಲ್ಲಿ ಸ್ತ್ರೀ ಸಂವೇದನೆ, ಪಿಎಚ್.ಡಿ. ಮಹಾಪ್ರಬಂಧ, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ-೨೦೦೩.

೧೧. ಮಾಧವ ಕುಲಕರ್ಣಿ : ಕಾರಂತರ ಕಾದಂಬರಿಗಳು, ವಿಮರ್ಶೆ, ತನುಮನ ಪ್ರಕಾಶನ, ಮೈಸೂರು – ೨೦೦೧.

೧೨. ಟಿ.ಪಿ. ಅಶೋಕ : ಶಿವರಾಮಕಾರಂತ ಎರಡು ಅಧ್ಯಯನಗಳು, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ – ೧೯೯೯.

೧೩. ಅನಂತ ನಾರಾಯಣ ಎಸ್. : ಕಾರಂತರ ಕಾದಂಬರಿಗಳಲ್ಲಿ ನಿಸರ್ಗ, ಕರ್ನಾಟಕ ಸಂಘ, ಪುತ್ತೂರು – ೧೯೯೨.

೧೪. ತಾಳ್ತ ಜೆ. ವಸಂತ ಕುಮಾರ : ಶಿವರಾಮ ಕಾರಂತ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು – ೨೦೦೩.

೧೫. ಸುಮಿತ್ರಾಬಾಯಿ ಬಿ.ಎನ್. : ಸ್ತ್ರೀವಾದ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು – ೧೯೯೯.

೧೬. ಜಿ.ಎಸ್. ಶಿವರುದ್ರಪ್ಪ : (ಸಂ) ಕಾದಂಬರಿಕಾರರಾಗಿ ಕಾರಂತ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು – ೧೯೮೩.

೧೭. ಹರಿದಾಸ ಭಟ್ ಕು.ಶಿ. ಕಾರಂತ ಪ್ರಪಂಚ ಗೀತಾ ಬುಕ್ ಹೌಸ್, ಮೈಸೂರು – ೧೯೬೯.

೧೮. ಎಚ್.ಎಸ್. ಶ್ರೀಮತಿ : ಸ್ತ್ರೀವಾದ, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ – ೨೦೦೩.

೧೯. ಮಹಿಳೆ : ಅಸ್ತಿತ್ವದ ಸಂಕಥನ ಪ್ರಗತಿ ಪುಸ್ತಕ ಮಾಲೆ – ೨೦೦೯, ಪ್ರಕಾಶಕರು : ಎಂ. ಭೈರೇಗೌಡ, ಪ್ರಗತಿ ಗ್ರಾಫಿಕ್ಸ್ – ಬೆಂಗಳೂರು, ನಂ. ೧೧೯, ೩ನೇ ತಿರುವು, ೮ನೇ ಮುಖ್ಯರಸ್ತೆ, ಹಂಪಿನಗರ, ಬೆಂಗಳೂರು – ೪೦.

೨೦. ಶಿವರಾಮ ಕಾರಂತರ ಲೇಖನಗಳು, ಸಂಪುಟ – ೨, ಭಾಷೆ, ಶಿಕ್ಷಣ, ಸಂಸ್ಕೃತಿ, ಸಂಶೋಧನೆ, ಸಂಪಾದಕಿ ಬಿ. ಮಾಲಿನಿ ಮಲ್ಯ, ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳ ಗಂಗೋತ್ರಿ – ೫೭೪ ೧೯೯ – ೧೯೯೪.

೨೧. ಡಾ. ಶಿವರಾಮಕಾರಂತರ ಧರ್ಮರಾಯನ ಸಂಸಾರ, ಹರ್ಷ ಪ್ರಕಟನಾಲಯ, ಪುತ್ತೂರು – ೧೯೭೨.

೨೨. ಡಾ. ಶಿವರಾಮಕಾರಂತರ ಮೈಮನಗಳ ಸುಳಿಯಲ್ಲಿ, ಹರ್ಷ ಪ್ರಕಟನಾಲಯ, ಪುತ್ತೂರು – ೧೯೭೦

೨೩. ಡಾ. ಶಿವರಾಮಕಾರಂತರ ಮೈಮನಗಳ ಸುಳಿಯಲ್ಲಿ, ಹರ್ಷ ಪ್ರಕಟನಾಲಯ, ಪುತ್ತೂರು – ೧೯೬೦

೨೪. ಎಸ್. ಎಲ್. ಭೈರಪ್ಪನವರ ಗೃಹಭಂಗ, ಸಾಹಿತ್ಯ ಭಂಡಾರ, ಜಂಗಮೇಸ್ತ್ರಿ, ಗಲ್ಲಿ, ಬಳೇಪೇಟೆ, ಬೆಂಗಳೂರು – ೫೩, (ಐದನೇ ಮುದ್ರಣ – ೨೦೦೧)

೨೫. ಜಿ.ಎಸ್. ಆಮೂರ ಕನ್ನಡ ಕಥನ ಸಾಹಿತ್ಯ ಕಾದಂಬರಿ, ಶ್ರೀಹರಿ ಪ್ರಕಾಶನ, ಧಾರವಾಡ – ೧೯೯೪.

೨೬. ಜಿ.ಎಸ್. ನಾಯಕ್, ಕಾರಂತರ ಕಾದಂಬರಿಗಳಲ್ಲಿ ಜೀವನ ಶ್ರದ್ಧೆ ಮತ್ತು ಶೋಧನೆ (ಕಾರಂತ ಮಂಥನ), ಶ್ರೀ ರಾಘವೇಂದ್ರ ಪ್ರಕಾಶನ, ಅಂಬಾರ ಕೊಡ್ಲ – ೨೦೦೦.

* * * * *